# ಸಾಹಿತ್ಯದ ಜೀವಾಳ

(ಷೋಪೆನ್ ಹೌರನ ಪ್ರಬಂಧಗಳು)

ಅನುವಾದಕರು

**ಗೊರೂರು ರಾಮಸ್ವಾಮಿ ಐಯಂಗಾರ್**

ಮೈಸೂರು

ಕಾವ್ಯಾಲಯ

[illegible]

**ಬೆಲೆ : ೧೦ ಆಣೆ.**

# ಸಾಹಿತ್ಯದ ಜೀವಾಳ

(ಷೋಪೆನ್ ಹೌರನ ಪ್ರಬಂಧಗಳು)

ಅನುವಾದಕರು :

**ಗೊರೂರು ರಾಮಸ್ವಾಮಿ ಐಯಂಗಾರ್**

ಮೈಸೂರು :

ಕಾವ್ಯಾಲಯ

೧೯೪೭

**ಬೆಲೆ : ೧೦ ಆಣೆ.**

# ಮುನ್ನುಡಿ

ಈ ಚಿಕ್ಕ ಪುಸ್ತಕದಲ್ಲಿ ಅಚ್ಚಾಗಿರುವ ನಾಲ್ಕು ಪ್ರಬಂಧಗಳನ್ನು ಜರ್ಮನ್ ಭಾಷೆಯ ಮೂಲದಲ್ಲಿ ಬರೆದ ಪ್ರಸಿದ್ಧ ವೇದಾಂತಿಯಾದ ಷೋಪನ್‌ಹೌರ್‌ರವರು ತಮ್ಮ ಗ್ರಂಥದ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ.

"ಈ ಗ್ರಂಥವನ್ನು ಎರಡು ಸಲ ಓದಿ ಎಂದು ಮಾತ್ರ ನಾನು ನಿಮಗೆ ಹೇಳುತ್ತೇನೆ. ನಿಮ್ಮ ಮನಸ್ಸಿಗೆ ನೀವು ಸರಿ ಎಂದುಕೊಂಡಿರುವ ಅಭಿಪ್ರಾಯಗಳು ಇದರಲ್ಲಿ ಇಲ್ಲದೆ ಇರಬಹುದು. ನಿಮಗೆ ಈ ಪುಸ್ತಕದಿಂದ ಅಸಮಾಧಾನವಾದರೆ, ಒಂದು ಗಳಿಗೆಯನ್ನೂ ಇದಕ್ಕಾಗಿ ವ್ಯರ್ಥ ಮಾಡದೆ ಪುಸ್ತಕವನ್ನು ಎಸೆದುಬಿಡಿ. ನೀವು ಹಾಗೆ ಮಾಡಿದರೂ ನನ್ನಮೇಲಿನ ಆಕ್ಷೇಪಣೆ ತಪ್ಪಿದಂತೆ ಆಗಲಿಲ್ಲ. ದುಡ್ಡು ಕೊಟ್ಟು ಪುಸ್ತಕವನ್ನು ಕೊಂಡುಕೊಂಡ ಮಹನೀಯರಿಗೆ ಪ್ರತಿಫಲವೇನು? ಕೊನೆಯಲ್ಲಿ ನಾನು ಈರೀತಿ ಸೂಚಿಸಿ ಪಾರಾಗುತ್ತೇನೆ. "ಓದದೆ ಇದ್ದರೂ ಪುಸ್ತಕದ ಉಪಯೋಗವನ್ನು ಮಾಡಿಕೊಳ್ಳುವ ಅನೇಕ ದಾರಿಗಳು ನಿಮಗೆ ಗೊತ್ತು. ಇನ್ನಾವುದಾದರೂ ಪುಸ್ತಕದಂತೆ ಇದನ್ನೂ ನಿಮ್ಮ ಲೈಬ್ರೇರಿಯಲ್ಲಿ ಇಡಬಹುದು. ಚೆನ್ನಾಗಿ ಬೈಂಡ್ ಮಾಡಿದರೆ ಇದು ಲಕ್ಷಣವಾಗಿ ಕಾಣುವುದು. ಇಲ್ಲದಿದ್ದರೆ, ನಿಮ್ಮ ಯಾರಾದರೂ ಅಲಂಕಾರಪ್ರಿಯರಾದ ರಸಿಕರಾದ ಗೆಳತಿಯರ ದಿವಾನಖಾನೆಯಲ್ಲಿ ಇದನ್ನು ಇಡಬಹುದು. ಕೊನೆಯದಾಗಿ ಇದೇ ಎಲ್ಲಾವುಗಳಿಂತ ಉತ್ತಮವಾದುದು. ನಾನೂ ಇದನ್ನೇ ನಿಮಗೆ ಸೂಚಿಸುತ್ತೇನೆ. ನೀವು ಇದನ್ನು ವಿಮರ್ಶೆಮಾಡಬಹುದು.

"ಇದು ವಿನೋದದ ಮಾತಾಯಿತು. ಇದನ್ನು ಯಾರಿಗಾಗಿ ಬರೆದಿದ್ದೇನೆಯೋ ಅವರ ಕೈಗೆ ಇದು ಈಗಲೋ ಇನ್ನು ಕೆಲವು ದಿನಗಳ ಮೇಲೋ ಖಂಡಿತ ಸಿಕ್ಕುವುದೆಂಬ ಆಸೆಯಿಂದ ಈ ಗ್ರಂಥದಿಂದ ಬೀಳ್ಕೊಳ್ಳುತ್ತೇನೆ. ಉಳಿದ ವಿಚಾರ ನನಗೆ ಗೊತ್ತಿದೆ. ಎಲ್ಲಾ ಜ್ಞಾನಕ್ಕೂ, ಅದರಲ್ಲೂ ಸತ್ಯದ ಜ್ಞಾನಕ್ಕೂ, ದೊರಕುವ ಜಯ ಅಲ್ಪವಾದುದು. ಸತ್ಯದ ಜ್ಞಾನವನ್ನು ಅನೇಕ ವರುಷಗಳ ಕಾಲ ಪೂರ್ವಾಪರ ವಿರೋಧವಾದುದೆಂದೂ, ಮತ್ತೆ ಅನೇಕ ವರುಷಗಳ ಕಾಲ ಅತ್ಯಲ್ಪವಾದುದೆಂದೂ ಕಾಣುತ್ತಾರೆ. ಈ ಎರಡು ದೊಡ್ಡ ಕಾಲಗಳ ನಡುವೆ, ಸತ್ಯಕ್ಕೆ ಎಲ್ಲೋ ಸ್ವಲ್ಪಕಾಲದ ಮಟ್ಟಿಗೆ ಜಯವುಂಟಾಗುತ್ತದೆ. ಈ ಮೊದಲನೆಯ ಸ್ಥಿತಿಯೇ ಗ್ರಂಥಕರ್ತನಿಗೂ ಸಂಭವಿಸುತ್ತದೆ. ಆದರೆ ಜೀವಮಾನ ಅಲ್ಪವಾದುದು; ಸತ್ಯ ಚಿರಕಾಲ ಬದುಕಿ ಕೆಲಸಮಾಡುತ್ತದೆ. ನಾವು ಸತ್ಯವನ್ನೇ ಹೇಳೋಣ."

ಈ ಗ್ರಂಥದಲ್ಲಿ ಇರುವ ನಾಲ್ಕು ಲೇಖನಗಳ ಪೈಕಿ ಮೂರನ್ನು "ವಿಚಾರವಾಹಿನಿ"ಯಲ್ಲಿ ಪ್ರಕಟಿಸಿದುದಕ್ಕಾಗಿ ಅದರ ಸಂಪಾದಕರಿಗೂ, ಈಗ ಈ ರೂಪದಲ್ಲಿ

ಪ್ರಕಟಿಸಿರುವ ಕಾವ್ಯಾಲಯದ ವ್ಯವಸ್ಥಾಪಕರಿಗೂ ಋಣಿಯಾಗಿದ್ದೇನೆ. ಅಚ್ಚಿನ ತಪ್ಪುಗಳನ್ನು ತಿದ್ದಿಕೊಂಡು ಓದಿಕೊಳ್ಳಬೇಕೆಂದು ವಾಚಕರನ್ನು ಬೇಡುತ್ತೇನೆ.

ಗೊರೂರು,
ಚಿತ್ರಭಾನುಸಂವತ್ಸರದ
ಚೈತ್ರಶುದ್ಧ ದ್ವಾದಶಿ.

**ಗೊರೂರು ರಾಮಸ್ವಾಮಿ ಐಯಂಗಾರ್.**



## ವಿಷಯ ಸೂಚಿಕೆ

---



---

# ಲೇಖನ ಕಲೆ

ಲೋಕದಲ್ಲಿ ಎರಡು ಬಗೆಯ ಗ್ರಂಥಕರ್ತರಿದ್ದಾರೆ. ವಿಷಯ ಪ್ರತಿಪಾದನೆಗಾಗಿ ಬರೆಯುವವರು ಕೆಲವರು; ಬರೆಯುವುದಕ್ಕಾಗಿಯೇ ಬರೆಯುವವರು ಕೆಲವರು. ಮೊದಲನೆಯ ಗುಂಪಿನವರಿಗೆ, ಇತರರಿಗೆ ತಿಳಿಸಲು ಅರ್ಹವಾದುವೆಂದು ತಮಗೆ ತೋರುವ ಯೋಚನೆಗಳೂ ಅನುಭವಗಳೂ ಉಂಟಾಗಿರುತ್ತವೆ. ಎರಡನೆಯ ಗುಂಪಿನವರಿಗೆ ಕೇವಲ ಹಣವು ಬೇಕಾಗಿರುತ್ತದೆ. ಆದುದರಿಂದ ಅವರು ಹಣಕ್ಕಾಗಿಯೇ ಬರೆಯುತ್ತಾರೆ. ಹಣಕ್ಕಾಗಿಯೇ ಬರೆಯುವವರನ್ನು ಈ ರೀತಿ ಗುರುತಿಸಬಹುದು. ಅವರಿಗೆ ಬರವಣಿಗೆಯ ಕೆಲಸ ಪ್ರಧಾನವಾದುದು. ಅವರ ಯೋಚನೆಗಳು, ಭಾವಗಳು, ಅಭಿಪ್ರಾಯಗಳು ಎಲ್ಲಾ ಬರವಣಿಗೆಯ ಕೆಲಸದ ಒಂದು ಭಾಗ ಮಾತ್ರ. ಅವರು ತಮ್ಮ ಭಾವಗಳನ್ನು ಎಷ್ಟು ಉದ್ದವಾಗಿ ಎಳೆಯಲು ಸಾಧ್ಯವೋ ಅಷ್ಟು ಉದ್ದವಾಗಿ ಎಳೆಯುತ್ತಾರೆ. ಅವರ ಆಲೋಚನೆಗಳು ಸುಳ್ಳು ಮಿಶ್ರವಾದವುಗಳೂ ಅಸ್ವಾಭಾವಿಕವಾದವುಗಳೂ ಚಂಚಲವಾದುವೂ ಆಗಿರುತ್ತವೆ ತಾವು ಸಹಜವಾಗಿ ಇರುವುದಕ್ಕಿಂತ ಬೇರೆ ವಿಧವಾಗಿ ಕಾಣಬೇಕೆಂಬುದು ಅವರ ಇಷ್ಟವಾದುದರಿಂದ, ತಾವು ಹೇಳುವುದನ್ನು ಸರಳವಾಗಿಯೂ ಸ್ಪಷ್ಟವಾಗಿಯೂ ಹೇಳಲು ಅವರಿಗೆ ಅಸಮಾಧಾನವೆನಿಸುತ್ತದೆ. ಆದುದರಿಂದ ಅವರ ಕೃತಿಗಳು ದೋಷಪೂರಿತವೂ ನಿಷ್ಪ್ರಷ್ಟವಲ್ಲದುವೂ ಆಗುತ್ತವೆ. ಕಾಗದವನ್ನು ತುಂಬುವುದು ಮಾತ್ರವೇ ಅವರ ಲೇಖನದ ಉದ್ದೇಶವೆಂದು ತಿಳಿಯಲು ಹೆಚ್ಚು ಹೊತ್ತು ಬೇಕಾಗುವುದಿಲ್ಲ. ಇದು ಕೆಲವು ವೇಳೆ ಅತ್ಯುತ್ತಮ ಲೇಖಕರ ವಿಚಾರದಲ್ಲೂ ಸಂಭವಿಸುತ್ತದೆ. ವಾಚಕನು ಇದನ್ನು ನೋಡಿದ ಕೂಡಲೆ ಪುಸ್ತಕವನ್ನು ಎಸೆದು ಬಿಡಬೇಕು. ಏಕೆಂದರೆ ಕಾಲವು ಅಮೌಲ್ಯವಾದುದು. ನಿಶ್ಚಯವೇನಂದರೆ ಲೇಖಕನು ಯಾವಾಗ ಕಾಗದವನ್ನು ತುಂಬುವುದಕ್ಕಾಗಿಯೇ ಬರೆಯಲು ಪ್ರಾರಂಭಿಸುವನೋ ಆಗ ಅವನು ವಾಚಕನಿಗೆ ಮೋಸಮಾಡುತ್ತಾನೆ. ಯಾಕೆಂದರೆ ತಾನು ಹೇಳಬೇಕಾದ ವಿಷಯ ಏನೋ ಇದೆ ಎಂಬ ನೆಪದಿಂದ ಅವನು ಬರೆಯುತ್ತಾನೆ

ಹಣವನ್ನು ಸಂಪಾದಿಸಲು ಬರೆಯುವುದು; ಹಕ್ಕುಗಳನ್ನು ಕಾದು ಇಡುವುದು ಇವೇ ಮುಖ್ಯವಾಗಿ ಸಾಹಿತ್ಯದ ಸುಡುಗಾಡು. ವಿಷಯವನ್ನು ಹೇಳುವುದಕ್ಕಾಗಿಯೇ ಯಾವನು ಬರೆಯುವುದಿಲ್ಲವೋ ಅವನಿಗೆ ಬರೆಯುವುದಕ್ಕೆ ಅರ್ಹವಾದುದು ಏನೂ ಇಲ್ಲ. ಸಾಹಿತ್ಯದ ಪ್ರತಿಯೊಂದು ಭಾಗದಲ್ಲು ಕೆಲ ಕೆಲವೇ ಪುಸ್ತಕಗಳಿದ್ದು-ಅವು ಅತ್ಯುತ್ತಮಗಳಾಗಿದ್ದರೆ-ಎಂತಹ ಮಂಗಳವುಂಟಾಗುತ್ತಿದ್ದಿತು! ಎಲ್ಲಿಯ ವರೆಗೆ ಬರೆಯುವುದರಿಂದ ಹಣ ಸಂಪಾದನೆಯಾಗುತ್ತದೋ ಅಲ್ಲಿಯ ವರೆಗೆ ಇದು ಎಂದಿಗೂ ನಡೆಯಲಾರದು. ಹಣದ ಮೇಲೆ ಏನೋ ಶಾಪವಿರುವಂತೆ ತೋರುತ್ತದೆ ಏಕೆಂದರೆ ಲಾಭದ ಆಸೆಯಿಂದ

ಯಾವಾಗ ಲೇಖಕನು ಕಾಗದದ ಮೇಲೆ ಕಡ್ಡಿಯನ್ನಿಡಲು ಪ್ರಾರಂಭಿಸುತ್ತಾನೊ ಆಗಲೇ ಅವನ ಅವನತಿಯು ಪ್ರಾರಂಭವಾಗುತ್ತದೆ. ಯಾವ ಲಾಭದ ಆಸೆಯೂ ಇಲ್ಲದೆ— ಅಥವ ಅತ್ಯಲ್ಪ ಲಾಭಕ್ಕಾಗಿ ಮಾತ್ರ—ಬರೆಯಲು ಪ್ರಾರಂಭಿಸಿದಾಗಲೇ ಶ್ರೇಷ್ಠ ಲೇಖಕರ ಕೃತಿರತ್ನಗಳು ಬಂದಿವೆ. ಇಲ್ಲಿಯೂ ಗೌರವವೂ ಹಣವೂ ಒಂದೇ ಕಡೆ ದೊರೆಯುವು ದಿಲ್ಲವೆಂಬ ಸ್ಪೇನ್ ಗಾದೆಯು ಅನ್ವಯಿಸುತ್ತದೆ. ಜನರು ಹಣ ಸಂಪಾದನೆಗಾಗಿ ಗ್ರಂಥ ಗಳನ್ನು ಬರೆಯುತ್ತಿರುವುದೇ ಸಾಹಿತ್ಯವು ಈಗ ಇಷ್ಟು ಹೀನಾವಸ್ಥೆಯಲ್ಲಿರುವುದಕ್ಕೆ ಕಾರಣವಾಗಿದೆ. ಹಣದ ಆವಶ್ಯಕತೆಯಿರುವವನು ಕುಳಿತುಕೊಂಡು ಒಂದು ಪುಸ್ತಕ ವನ್ನು ಬರೆಯುತ್ತಾನೆ. ಜನರು ಅದನ್ನು ಕೊಳ್ಳುವಷ್ಟು ದಡ್ಡರಾಗಿರುತ್ತಾರೆ. ಇದರ ಫಲವು ಭಾಷೆಯ ನಾಶ.

ಹೊಸ ಹೊಸದಾಗಿ ಅಚ್ಚಾಗಿರುವ ವಿಷಯಗಳನ್ನು ಹೊರತು ಮತ್ತೇನನ್ನೂ ಓದ ದಿರುವ ಜನರ ಹುಚ್ಚಿನಿಂದಲೇ ಅನೇಕ ಕೆಟ್ಟ ಬರಹಗಾರರು ತಮ್ಮ ಜೀವನವನ್ನು ನಡೆಸುತ್ತಾರೆ. ನಾನು ಹೇಳುವುದು ವೃತ್ತಪತ್ರಿಕಾಕರ್ತರನ್ನು ಕುರಿತು. ಇವರಿಗೆ ದಿನಗೂಲಿಯವರು ಅಥವಾ ಚೇಗೂಲಿಗಳು ಎಂದು ಕರೆಯುವುದು ಅನ್ವರ್ಥವಾಗಿದೆ.

ಮತ್ತೆ ಲೇಖಕರಲ್ಲಿ ಮೂರು ಬಗೆಯವರಿದ್ದಾರೆಂದು ಹೇಳಬಹುದು. ಯೋಚನೆ ಮಾಡದೆ ಬರೆಯುವವರು ಮೊದಲನೆಯವರು. ಅವರು ಮನಸ್ಸಿನಲ್ಲಿ ತುಂಬಿರುವ ನೆನಪುಗಳಿಂದ ಬರೆಯುತ್ತಾರೆ. ಅನೇಕ ವೇಳೆ ಇತರರ ಪುಸ್ತಕವೆಂದಲೇ ನೇರವಾಗಿ ತೆಗೆದು ಬರೆಯಬಹುದು ಆ ಗುಂಪೆ ಬಹಳ ದೊಡ್ಡದು ಬರೆಯುತ್ತಿರುವಾಗ ಆಲೋ ಚನೆ ಮಾಡುವವರದು ಎರಡನೆಯದು. ಅವರು ಯೋಚನೆ ಮಾಡುವುದು ಬರೆಯುವುದ ಕ್ಕಾಗಿಯೇ. ಅವರ ಸಂಖ್ಯೆಯಾದರೂ ಕಡಿಮೆಯಿಲ್ಲ. ಬರವಣಿಗೆಯನ್ನು ಪ್ರಾರಂಭಿಸು ವುದಕ್ಕೆ ಮುಂಚೆ ಯೋಚನೆ ಮಾಡುವ ಗ್ರಂಥಕರ್ತರೇ ಕೊನೆಯ ಪಂಗಡದವರು. ಅವರು ಬಹಳ ವಿರಳ.

ಬರೆಯುವುದಕ್ಕೆ ಪ್ರಾರಂಭಿಸುವವರೆಗೆ ಯೋಚನೆ ಮಾಡದಿರುವ ಎರಡನೆಯ ಗುಂಪಿನ ಲೇಖಕರು ಗೊತ್ತುಗುರಿಯಿಲ್ಲದೆ ಬೇಟೆಗೆ ಹೊರಡುವ ಬೇಟೆಗಾರರಂತೆ. ಅವರು ಮನೆಗೆ ಹೆಚ್ಚು ಬೇಟೆಯನ್ನು ತರುವ ಸಂಭವವಿಲ್ಲ. ಆದರೆ ಮೂರನೆ ಗುಂಪಿನ ಅಥವಾ ಅಪರೂಪನಾದ ಲೇಖಕನು ಬರೆಯುವಾಗ ಬಾಟ್ಟ್ಯು (Battwe) ಆಟದಂತೆ. ಇಲ್ಲಿ ಬೇಟೆಯು ಮೊದಲೆ ಹಿಡಿಯಲ್ಪಟ್ಟು ಸ್ವಲ್ಪವೇ ಪ್ರದೇಶದಲ್ಲಿ ಬಂಧಿತವಾಗಿರುತ್ತದೆ. ಅಲ್ಲಿಂದ ಒಂದೊಂದು ಸಲಕ್ಕೆ ಇಷ್ಟು ಇಷ್ಟು ಎಂದು ಕ್ಲಿಪ್ತವಾದ ರೀತಿಯಲ್ಲಿ ಅದು ತಪ್ಪಿಸಿಕೊಳ್ಳದಂತೆ ಮತ್ತೊಂದು ಆವರಣಕ್ಕೆ ಬಿಡಲ್ಪಡುತ್ತದೆ. ಬೇಟೆ ಏನಾದರೂ ಬೇಟೆಗಾರನ ಕೈಯಿಂದ ತಪ್ಪಿಸಿಕೊಳ್ಳಲಾರದು. ಗುರಿಯಿಟ್ಟು ಹೊಡೆಯುವುದರ ಹೊರತು ಅವನಿಗೆ ಬೇರೆ ಕೆಲಸವಿಲ್ಲ. ಬೇರೆ ಮಾತುಗಳಲ್ಲಿ ಹೇಳುವುದಾದರೆ ತನ್ನ ಯೋಚನೆ

ಗಳನ್ನು ಬರೆಯುವುದರ ಹೊರತು ಅವನಿಗೆ ಬೇರೆ ಕೆಲಸವಿಲ್ಲ. ಲೇಖನ ಕಲೆಯೂ ತನ್ನ ಯೋಗ್ಯತೆಯನ್ನು ತೋರಿಸಿಕೊಳ್ಳಲು ಮನುಷ್ಯನಿಗಿರುವ ಒಂದು ವಿಧವಾದ ಬೇಟೆ.

ಬರೆಯುವುದಕ್ಕೆ ಪ್ರಾರಂಭಿಸುವುದಕ್ಕಿಂತ ಮುಂಚೆ ಮನಸ್ಸಿಟ್ಟು ಚೆನ್ನಾಗಿ ಯೋಚಿಸುವವರ ಸಂಖ್ಯೆಯೇ ಕಡಿಮೆಯಾಗಿದ್ದರೂ ಬರೆಯಬೇಕಾದ ವಿಷಯವನ್ನೇ ಕುರಿತು ಯೋಚಿಸುವವರ ಸಂಖೆ ಅದಕ್ಕಿಂತ ಕಡಿಮೆಯಾಗಿದೆ. ಇತರರು ಆ ವಿಷಯದ ಮೇಲೆ ಬರೆದಿರುವ ಪುಸ್ತಕಗಳನ್ನೂ, ಇತರರು ಏನು ಹೇಳಿರುವರೆಂಬುದನ್ನೂ ಅವರು ಯೋಚಿಸುತ್ತಾರೆ ಇಂತಹ ಬರಹಗಾರರಿಗೆ ತಾವು ಆಲೋಚನೆ ಮಾಡಬೇಕಾದರೇನೆ, ಇತರರ ಆಲೋಚನೆಗಳ ನೇರವಾದ ಸ್ಫೂರ್ತಿಯು ತಮ್ಮ ಮುಂದೆ ಇರುವುದು ಆವಶ್ಯಕವಾಗಿದೆ. ಅದರ ಫಲವಾಗಿ ಅವರು ಯಾವಾಗಲೂ ಇತರರ ಪ್ರತಿಭೆಗೆ ಒಳಗಾಗಿರುತ್ತಾರೆ. ಇತರರ ಯೋಚನೆಗಳೇ ಅವರ ಮುಖ್ಯ ವಿಷಯಗಳಾಗುತ್ತವೆ. ಅವರು ಸ್ವತಃ ಸ್ಫೂರ್ತಿಯುಳ್ಳವರಾಗಿರುವುದು ಅಪರೂಪ. ಮೂರನೆ ಪಂಗಡದವರು ವಿಷಯಕ್ಕೆ ಸಂಬಂಧಿಸಿದ ಯೋಚನೆಗೇ ನೆಟ್ಟಗೆ ಹೋಗುತ್ತಾರೆ. ಶಾಶ್ವತವಾದ ಯಶಸ್ಸನ್ನು ಪಡೆಯುವ ಬರಹಗಾರರನ್ನು ಸೃಷ್ಟಿಸುವುದು ಇದೊಂದೆ ಪಂಗಡ.

ಮಹತ್ತರವಾದ ವಿಷಯಗಳ ಮೇಲೆ ಬರೆಯುವ ಲೇಖಕರನ್ನು ಕುರಿತು ಮಾತ್ರ ನಾನು ಇಲ್ಲಿ ಹೇಳುತ್ತಿರುವೆನೇ ಹೊರತು ಸಾರಾಯಿ ಇಳಿಸುವ ಕಲೆಯನ್ನು ಕುರಿತು ಬರೆಯುವವರನ್ನು ಉದ್ದೇಶಿಸಿ ಅಲ್ಲ.

ಲೇಖಕನು ಯಾವ ವಿಷಯದ ಮೇಲೆ ಬರೆಯುತ್ತಾನೋ ಅದರ ವಸ್ತುವನ್ನು ತನ್ನ ಬುದ್ಧಿಯಿಂದ, ತನ್ನ ಪ್ರತ್ಯಕ್ಷಾನುಭವದಿಂದ ಬರೆಯದಿದ್ದರೆ ಅದು ಓದುವುದಕ್ಕೆ ಅರ್ಹವಾದುದಲ್ಲ. ಪುಸ್ತಕಗಳನ್ನು 'ತಯಾರಿಸುವವರು' ಸಂಗ್ರಾಹಕರು ಇನ್ನು ಉಳಿದ ಸಾಮಾನ್ಯ ಚರಿತ್ರಕಾರರು, ಅವರ ಗುಂಪಿಗೆ ಸೇರಿದ ಇನ್ನೂ ಅನೇಕರು ಇವರೆಲ್ಲಾ ತಮ್ಮ ವಸ್ತುಗಳನ್ನು ನೇರವಾಗಿ ಇತರರ ಪುಸ್ತಕಗಳಿಂದಲೇ ತೆಗೆದುಕೊಳ್ಳುವರು. ಆ ವಸ್ತುವು ನೇರವಾಗಿ ದಾರಿಯ ವೆಚ್ಚವಿಲ್ಲದೆ, ಪರೀಕ್ಷೆಗೂ ಒರೆಗಲ್ಲಿಗೂ ಸಿಲುಕದೆ ಅವರ ತಲೆಗಳ ಮೂಲಕ ಹಾಯ್ದು ಬೆರಳುಗಳಿಂದ ಲೇಖನಿಯ ತುದಿಗೆ ಹೋಗುತ್ತದೆ. ಅದನ್ನು ಪರೀಕ್ಷಿಸುವುದೂ ತಿದ್ದುವುದೂ ಒತ್ತಟ್ಟಿಗೆ ಇರಲಿ! ತಾನು ಬರೆದ ಗ್ರಂಥಗಳಲ್ಲಿ ಅಡಕವಾಗಿರುವ ಎಲ್ಲಾ ಜ್ಞಾನವು ತನಗೆ ತಿಳಿದಿದ್ದರೆ ಅನೇಕ ಮನುಷ್ಯರು ಎಷ್ಟೊಂದು ಜ್ಞಾನಿಗಳಾಗಿರುತ್ತಿದ್ದರು! ಇದರ ಫಲವೇನೆಂದರೆ, ಲೇಖಕರು ಬಹಳ ಸಡಿಲವಾದ ಗುರಿಯಿಲ್ಲದ ಅಸ್ಪಷ್ಟವಾದ ರೀತಿಯಲ್ಲಿ ಬರೆಯುತ್ತಾರೆ. ವಾಸ್ತವವಾಗಿ ಅವರ ಅಭಿಪ್ರಾಯಗಳೇನೆಂದು ತಿಳಿಯಲು ಓದುಗರು ಎಷ್ಟು ತಲೆ ಕೆಡಿಸಿಕೊಂಡರೂ ಅದು ವ್ಯರ್ಥವೇ ಆಗುತ್ತದೆ. ಯಾಕೆಂದರೆ ಅವರಲ್ಲಿ ಯಾವ ಆಲೋಚನೆಗಳೂ ಇರುವುದೇ ಇಲ್ಲ. ಅನೇಕ ವೇಳೆ ಅವರು ಯಾವ ಗ್ರಂಥದಿಂದ ನಕಲು ಮಾಡುತ್ತಾರೋ ಆ ಗ್ರಂಥವು ಅವರ

ಗ್ರಂಥದ ರೀತಿಯಲ್ಲೇ ಸ್ವಲ್ಪವೂ ಹೆಚ್ಚು ಕಡಿಮೆಯಿಲ್ಲದೆ ಬರೆದಿರಲ್ಪಡಬಹುದು. ಆದುದರಿಂದ ಇಂತಹ ಬರವಣಿಗೆಗಳೆಲ್ಲಾ ಒಂದೇ ಅಚ್ಚಿನಲ್ಲಿ ಎರಕಹೊಯ್ದ ಗಾರೆಯ ಪಡಿಯಚ್ಚುಗಳಂತೆ ಆಗುತ್ತವೆ. ಇಂತಹ ಪಡಿಯಚ್ಚಿನಲ್ಲಿ ಕೊನೆಗೆ ವಿಗ್ರಹವಾವುದೆಂಬುದನ್ನು ಕೂಡ ಗುರುತಿಸುವುದು ಕಷ್ಟವಾಗುತ್ತದೆ. ಮುಖದ ಛಾಯೆಯನ್ನು ಮಾತ್ರ ಪತ್ತೆಮಾಡಬಹುದು. 'ಸಂಗ್ರಹಗಳನ್ನು' ಆದಷ್ಟು ಕಡಿಮೆ ಓದಿ. ಸ್ವಲ್ಪವೇ ಸ್ಥಳದಲ್ಲಿ ಅನೇಕ ಶತಮಾನಗಳ ಕೂಡಿಟ್ಟ ಜ್ಞಾನವು ತುಂಬಿರುವ ಗ್ರಂಥಗಳೂ ಈ 'ಸಂಗ್ರಹ'ಗಳಲ್ಲಿ ಬರುವುದರಿಂದ ಅವುಗಳನ್ನು ಪೂರ್ಣವಾಗಿ ಬಹಿಷ್ಕರಿಸಲು ಸಾಧ್ಯವಿಲ್ಲ

ನೆನ್ನೆ ಮೊನ್ನೆ ಬರೆದ ಗ್ರಂಥವೇ ಹೆಚ್ಚು ಶುದ್ಧವಾದುದೆಂದೂ, ಮೊದಲು ಬರೆದ ಗ್ರಂಥಕ್ಕಿಂತ ಈಚೆಗೆ ಬರೆದ ಗ್ರಂಥವು ಯಾವಾಗಲೂ ಹೆಚ್ಚು ಯೋಗ್ಯತೆಯುಳ್ಳದುದೆಂದೂ ನಾಗರೀಕತೆ ಎಂದೂ ಊಹಿಸುವುದು ದೊಡ್ಡ ತಪ್ಪು. ನಿಜವಾಗಿ ಆಲೋಚನೆ ಮಾಡುವವರು, ವಿವೇಕಿಗಳು, ತಾವು ಬರೆಯುವ ವಿಷಯದಲ್ಲಿ ಶ್ರದ್ಧೆಯುಳ್ಳವರು ಅಪರೂಪ. ಪ್ರಪಂಚದಲ್ಲಿ ಕ್ರಿಮಿಕೀಟಗಳು ಎಲ್ಲೆಲ್ಲೂ ಇವೆ. ಜ್ಞಾನಿಗಳ ಪಕ್ವವಾದ ಅಭಿಪ್ರಾಯಗಳನ್ನು ತೆಗೆದುಕೊಂಡು ಅವುಗಳನ್ನು ಹೆಚ್ಚು ಚೆನ್ನಾಗಿ ಶುದ್ಧಪಡಿಸುತ್ತೇವೆಂದು ಕುರೂಪವಾಗಿ ಮಾಡಲು ಅವು ಯಾವಾಗಲೂ ಸಿದ್ಧವಾಗಿರುತ್ತವೆ.

ಯಾವುದಾದರೂ ವಿಷಯದಲ್ಲಿ ವ್ಯಾಸಂಗ ಮಾಡಬೇಕಾದರೆ ಪಾಠಕನು ಎಚ್ಚರಿಕೆಯಿಂದ ಹೊರಡಬೇಕು. ಶಾಸ್ತ್ರವು ಯಾವಾಗಲೂ ಮುಂದುವರಿಯುತ್ತಿದೆ, ಹೊಸದು ಯಾವಾಗಲೂ ಹಳೆಯವರ ಆಧಾರದಿಂದಲೇ ಬರೆಯಲ್ಪಟ್ಟಿದೆ ಎಂದುಕೊಂಡು ಆ ಶಾಸ್ತ್ರದ ಮೇಲೆ ಬರೆದಿರುವ ಹೊಸ ಪುಸ್ತಕಗಳನ್ನು ಮಾತ್ರವೇ ಓದಿದರೆ ಸಾಲದು. ಹೊಸ ಗ್ರಂಥಗಳು ಹಳೆಯವುಗಳ ಆಧಾರದ ಮೇಲೆ ಬರೆಯಲ್ಪಟ್ಟಿವೆ ಎಂಬುದೇನೊ ನಿಶ್ಚಯ. ಆದರೆ ಹೇಗೆ? ಹೊಸ ಲೇಖಕನಿಗೆ ಅನೇಕ ವೇಳೆ ಹಳೆಯ ಪುಸ್ತಕದ ಅರ್ಥವಾಗಿರುವುದಿಲ್ಲ. ಆದರೆ ಅವನಿಗೆ ಹಳೆಯ ಗ್ರಂಥದ ಮಾತುಗಳನ್ನೆ ತೆಗೆದುಕೊಳ್ಳಲು ಸಮಾಧಾನವಿರುವುದಿಲ್ಲ. ಆದುದರಿಂದ ಅವನು ಆ ಮಾತುಗಳನ್ನು ಅಡ್ಡಾದಿಡ್ಡಿಯಾಗಿ ತಿರುಗಿಸುತ್ತಾನೆ. ವಿಷಯ ಜೀವಾಳ ಜ್ಞಾನದಿಂದ, ಸ್ಪಷ್ಟವಾಗಿಯೂ ಉತ್ತಮವಾಗಿಯೂ ಹಳೆಯ ಬರಹಗಾರರು ಬರೆದಿರುವುದನ್ನು ಹೊಸ ಲೇಖಕನು ತನ್ನದೇ ಆದ ಕೆಟ್ಟ ರೀತಿಯಲ್ಲಿ ಹೇಳುತ್ತಾನೆ. ಹೊಸ ಲೇಖಕನು ಅನೇಕ ವೇಳೆ ಹಳೆಯವರು ಹೇಳುವ ಉತ್ತಮವಾದ ವಿಷಯಗಳನ್ನೂ ಮನಸ್ಸು ಹಿಡಿಯುವ ದೃಷ್ಟಾಂತಗಳನ್ನೂ ಬಹು ಸಮಂಜಸವಾದ ಅಭಿಪ್ರಾಯಗಳನ್ನೂ ಬಿಟ್ಟುಬಿಡುತ್ತಾನೆ. ಅವುಗಳ ಬೆಲೆಯು ಅವನಿಗೆ ಕಾಣುವುದಿಲ್ಲ. ಅವು ಎಷ್ಟು ಅರ್ಥಪೂರ್ಣವಾದುವುಗಳೆಂಬುದೂ ಅವನ ಅನುಭವಕ್ಕೆ ಬರುವುದಿಲ್ಲ. ಅವನ ಮನಸ್ಸಿಗೆ ಹಿಡಿಯುವುದು ಅಲ್ಪವಾದುದೂ ಆಳವಿಲ್ಲದುದೂ ಮಾತ್ರ.

ಅನೇಕ ವೇಳೆ ಶ್ರೇಷ್ಠವಾದ ಮತ್ತು ಉತ್ತಮವಾದ ಹಳೆಯ ಗ್ರಂಥವನ್ನು ಹೊಸ ಗ್ರಂಥಗಳು ಹಿಂದಕ್ಕೆ ಹಾಕುವುದುಂಟು. ಅಂತಹ ಹೊಸಗ್ರಂಥಗಳು ಹಣದಾಸೆಯಿಂದ ರಚಿತವಾಗಿ ಸ್ನೇಹಿತರ ಹೊಗಳಿಕೆಗೆ ಪಾತ್ರವಾಗಿ ದುರಭಿಮಾನದಿಂದ ಮೆರೆಯುತ್ತವೆ ವಿಜ್ಞಾನ ಶಾಸ್ತ್ರದಲ್ಲಿ ಲೇಖಕನು ಸಾಧಾರಣವಾಗಿ ಹೊಸ ವಿಷಯಗಳನ್ನು ಬರೆದು ತನ್ನ ಯೋಗ್ಯತೆಯನ್ನು ಸ್ಥಾಪಿಸಲು ಪ್ರಯತ್ನಪಡುತ್ತಾನೆ. ತನ್ನ ಅಭಿಪ್ರಾಯಗಳು ತಪ್ಪಾಗಿದ್ದರೂ ಅವಕ್ಕೆ ಸ್ಥಳ ದೊರೆಯಲೆಂದು ಶುದ್ಧವಾದ ಹಳೆಯ ಅಭಿಪ್ರಾಯಗಳನ್ನ ಎದುರಿಸುವುದೇ ಇವರ ಅರ್ಥ. ಒಂದೊಂದು ಸಮಯದಲ್ಲಿ ಸ್ವಲ್ಪ ಕಾಲದವರೆಗೆ ಇದು ಜಯಿಸಬಹುದು. ಅನಂತರ ಹಳೆಯದಾದ ಸರಿಯಾದ ಅಭಿಪ್ರಾಯಗಳಿಗೇ ಜನರು ಹಿಂದಿರುಗುತ್ತಾರೆ. ಈ ಬದಲಾವಣೆಗಾರರಿಗೆ ತಮ್ಮ ಅಮೌಲ್ಯವಾದ ಸ್ವಾರ್ಥದ ಹೊರತು ಮತ್ತಾವುದರಲ್ಲೂ ಶ್ರದ್ಧೆಯಿರುವುದಿಲ್ಲ. ಅವರು ಈ ಸ್ವಾರ್ಥವನ್ನು ಯಾವಾಗಲೂ ಮುಂದೊಡ್ಡುತ್ತಾರೆ. ಇದಕ್ಕೆ ಸುಲಭವಾದ ಶ್ರೇಷ್ಠವಾದ ದಾರಿ ಯಾವುದೆಂದರೆ ಒಂದು ವಿಪರೀತವಾದ ವಿರೋಧಾಭಾಸವನ್ನು ಪ್ರಾರಂಭಿಸುವುದು. ಅವರ ಬಂಜೆಯಾದ ಮೆದುಳು ಸ್ವಾಭಾವಿಕವಾಗಿ ನಿಷೇದವಾದದ ದಾರಿಯನ್ನೆ ಹಿಡಿಯುತ್ತವೆ. ಬಹುಕಾಲದಿಂದ ಲೋಕವು ಒಪ್ಪಿಕೊಂಡಿರುವ ಸತ್ಯಗಳನ್ನೇ ಅವರು ಸುಳ್ಳೆನ್ನುತ್ತಾರೆ........ಆದುದರಿಂದಲೇ ವಿಜ್ಞಾನದ ಬೆಳವಣಿಗೆಯು ಅನೇಕ ವೇಳೆ ಹಿಮ್ಮೊಗವಾಗಿದೆ ಎನ್ನುವುದು.

ಇದೇ ಜಾತಿಗೆ ಭಾಷಾಂತರಕಾರರೂ ಸೇರುತ್ತಾರೆ. ಯಾಕೆಂದರೆ ಅವರು ಮೂಲ ಗ್ರಂಥವನ್ನು ಭಾಷಾಂತರ ಮಾಡುವುದು ಮಾತ್ರವಲ್ಲದೆ ತಿದ್ದಿ ಪರಿಷ್ಕರಿಸುತ್ತಾರೆ. ಇದು ಯಾವಾಗಲೂ ತಲೆಹರಟೆ ಎಂದೇ ನನ್ನ ಅಭಿಪ್ರಾಯ. ಅಂಥವರಿಗೆ ನಾನು ಹೇಳುವುದು ಇಷ್ಟೆ. 'ಭಾಷಾಂತರಿಸಲು ಯೋಗ್ಯವಾದ ಗ್ರಂಥಗಳನ್ನು ನೀವೆ ಸ್ವಂತವಾಗಿ ಬರೆಯಿರಿ. ಇತರರ ಗ್ರಂಥಗಳನ್ನು ಅವು ಇರುವಂತೆ ಇಟ್ಟುಬಿಡಿ'.

ಸಾಧ್ಯವಾದರೆ ವಾಚಕನು ಸತ್ಯಗಳನ್ನ ಕಂಡುಹಿಡಿದಿರುವ ಮೂಲ ಲೇಖಕರ ಗ್ರಂಥಗಳನ್ನೇ ವ್ಯಾಸಂಗ ಮಾಡಬೇಕು. ಅದು ಸಾಧ್ಯವಾಗದಿದ್ದರೆ ಆಯಾ ಶಾಸ್ತ್ರದಲ್ಲಿ ನಿಸ್ಸೀಮ ಪಂಡಿತರಾದವರ ಗ್ರಂಥಗಳನ್ನಾದರೂ ವ್ಯಾಸಂಗ ಮಾಡಬೇಕು. ಹೊಸ ಪುಸ್ತಕಗಳಲ್ಲಿ ಓದುವುದಕ್ಕಿಂತ ಹಳೆಯ ಪುಸ್ತಕಗಳನ್ನು ಕೊಳ್ಳಿರಿ. ಹೊಸ ಶೋಧಕ್ಕೆ ಹೆಚ್ಚು ಹೆಚ್ಚಾಗಿ ಸೇರಿಸುವುದು ಸುಲಭ. ವಿದ್ಯಾರ್ಥಿಯು ತಾನು ವ್ಯಾಸಂಗ ಮಾಡುತ್ತಿರುವ ವಿಷಯವನ್ನು ಮೂಲದಲ್ಲಿ ಕರತಲಾಮಲಕವಾಗಿ ಮಾಡಿಕೊಂಡ ಮೇಲೆ, ಅದಕ್ಕೆ ಈಚೆಗೆ ಹೊಸದಾಗಿ ಸೇರಿರುವ ವಿಷಯಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಸಾಧಾರಣವಾಗಿ ಇತರ ಕಡೆ ಹೇಳಿರುವಂತೆ ಇಲ್ಲಿಯೂ ಈ ಕೆಳಗಿನ ನಿಯಮವನ್ನೇ ಹೇಳಬ

ಹುದು. "ಒಂದು ವಸ್ತುವು ಹೊಸದಾಗಿದ್ದರೆ ಅದು ಅಪರೂಪವಾಗಿ ಉತ್ತಮವಾಗಿರುತ್ತದೆ. ಯಾಕೆಂದರೆ ಅದು ಉತ್ತಮವಾಗಿದ್ದರೆ ಸ್ವಲ್ಪ ಕಾಲಮಾತ್ರ ಹೊಸದಾಗಿರುತ್ತದೆ."

ಪತ್ರಕ್ಕೆ (ಕಾಗದಕ್ಕೆ) ವಿಳಾಸವು ಹೇಗೋ ಪುಸ್ತಕಕ್ಕೆ ಹೆಸರು ಹಾಗೆ. ಆ ಪುಸ್ತಕದಲ್ಲಿ ಹೇಳಿರುವ ವಿಷಯದಲ್ಲಿ ಉತ್ಸಾಹವುಳ್ಳ ವಾಚಕನ ಕೈಗೆ ಆ ಗ್ರಂಥವು ಬರುವಂತೆ ಮಾಡುವುದೇ ಹೆಸರಿನ ಉದ್ದೇಶವಾಗಿರಬೇಕು. ಹೆಸರು ಸ್ಪಷ್ಟವಾಗಿರಬೇಕು; ಸಂಕ್ಷೇಪವಾಗಿ ಅರ್ಥಪೂರ್ಣವಾಗಿರಬೇಕು. ಸಾಧ್ಯವಾದರೆ ಒಂದೇ ಮಾತಿನಲ್ಲಿ ವಿಷಯಸೂಚನೆಯನ್ನು ಒಳಗೊಂಡಿರಬೇಕು. ವಿಸ್ತಾರವಾದ ಹೆಸರು ಕೆಟ್ಟದ್ದು, ಏನನ್ನೂ ಸೂಚಿಸದೆ ಇರುವ ಹೆಸರೂ ಹಾಗೆಯೇ ಕೆಟ್ಟದ್ದು. ಸ್ಪಷ್ಟವಾಗಿಲ್ಲದ, ತಪ್ಪು ಅರ್ಥವುಳ್ಳ, ಶ್ಲೇಷಾರ್ಥದ ಅಥವ ಸುಳ್ಳಾದ ಹೆಸರು ಕೆಟ್ಟದು. ತಪ್ಪು ಅರ್ಥವುಳ್ಳ ಹೆಸರಿನ ಪುಸ್ತಕಕ್ಕೆ, ತಪ್ಪು ವಿಳಾಸದ ಕಾಗದಕ್ಕೆ ಆಗುವ ಗತಿಯೇ ಆಗುತ್ತದೆ. ಎಲ್ಲವುಗಳಿಗಿಂತ ಕೆಟ್ಟ ಹೆಸರು ಇತರರಿಂದ ಕದ್ದಿರುವ ಹೆಸರು ಅಂದರೆ ಇತರರು ತಮ್ಮ ಪುಸ್ತಕಗಳಿಗೆ ಇಟ್ಟಿರುವ ಹೆಸರು. ಏಕೆಂದರೆ ಅದ ಮೊದಲನೆಯದಾಗಿ ಕಳ್ಳತನ, ಎರಡನೆಯದಾಗಿ ಗ್ರಂಥಕರ್ತನಿಗೆ ಸ್ವಲ್ಪವೂ ಊಹನಾಶಕ್ತಿ ಇಲ್ಲವೆಂಬುದಕ್ಕೆ ನಿಸ್ಸಂದೇಹವಾದ ಸಾಕ್ಷಿ. ಯಾವ ಮನುಷ್ಯನಿಗೆ ತನ್ನ ಪುಸ್ತಕಕ್ಕೆ ಹೊಸ ಹೆಸರನ್ನು ಕಂಡುಹಿಡಿಯುವ ಊಹನಾಶಕ್ತಿಯಿಲ್ಲವೊ ಆವನಿಗೆ ಪುಸ್ತಕಗಳನ್ನು ಬರೆಯುವ ಉತ್ಪಾದಕ ಶಕ್ತಿ ಇನ್ನೂ ಕಡಿಮೆಯಾಗಿರುತ್ತದೆ. ಹೆಸರುಗಳನ್ನು ಅನುಕರಿಸುವುದೂ ಕದಿಯುವುದಕ್ಕೆ ಸಮಾನವಾದುದು ಅನುಕರಿಸುವುದೆಂದರೆ ಅರ್ಧಮಟ್ಟಿಗೆ ಕದಿಯುವುದು. ಉದಾಹರಣೆಗಾಗಿ ನಾನು 'ಪ್ರಕೃತಿಯಲ್ಲಿ ಇಚ್ಛಾ' ಎಂಬ ವಿಷಯದಲ್ಲಿ ನಿಬಂಧವನ್ನು ಬರೆದ ಬಹುಕಾಲದ ನಂತರ ಓಎರ್‌ಸ್ಟೆಡ್ ಎಂಬುವನು "ಪ್ರಕೃತಿಯಲ್ಲಿ ಮನಸ್ಸು" ಎಂಬ ಪುಸ್ತಕವನ್ನು ಬರೆದನು.

ಗ್ರಂಥವು ಯಾವಾಗಲೂ ಲೇಖಕನ ಆಲೋಚನೆಗಳ ಪಡಿಯಚ್ಚೇ ಹೊರತು ಮತ್ತೇನೂ ಅಲ್ಲ. ಮತ್ತು ಅದರ ಬೆಲೆಯು ಗ್ರಂಥದ ವಿಷಯ ಮತ್ತು ಆ ಆಲೋಚನೆಗಳು ಹೊಂದಿರುವ ರೂಪ ಇವುಗಳಲ್ಲಿ ಅಡಕವಾಗಿದೆ. ಅಂದರೆ ಲೇಖಕನು ವಿಷಯದ ಮೇಲೆ ಏನನ್ನು ಕುರಿತು ಯೋಚಿಸುತ್ತಿದ್ದಾನೋ ಅದರ ಮೇಲೆ ಅಡಕವಾಗಿದೆ.

ಗ್ರಂಥಗಳ ವಸ್ತುಗಳು ಅನೇಕವಾಗಿವೆ. ಆ ವಸ್ತುಗಳ ಕಾರಣದಿಂದ ಗ್ರಂಥದಲ್ಲಿ ಸೇರಿರುವ ಸೌಂದರ್ಯಗಳೂ ಬಗೆಬಗೆಯಾಗಿವೆ. ಗ್ರಂಥದ ವಸ್ತು ಎಂಬುದರಲ್ಲಿ ಅನುಭವ ಪ್ರಪಂಚದಲ್ಲಿ ಒರತಕ್ಕ ಎಲ್ಲಾ ವಸ್ತುಗಳೂ ಅಡಕವಾಗಿರುತ್ತವೆ. ಅದರಲ್ಲಿ ಇತಿಹಾಸದ ಸಂಗತಿಗಳೂ ಪ್ರಕೃತಿಯ ವಿಷಯಗಳೂ ಅವುಗಳ ವಿಶಾಲವಾದ ಅರ್ಥದಲ್ಲಿ ಸೇರಿವೆ. ಇಲ್ಲಿ ವಿಷಯವು ಯಾವುದೋ ಅದರ ಕಾರಣದಿಂದಲೇ ಗ್ರಂಥಕ್ಕೆ ಯೋಗ್ಯತೆಯುಂಟಾಗುತ್ತದೆ. ಬರೆದವನು ಯಾರಾದರೂ ಗ್ರಂಥವು ವಿಷಯದಿಂದ ಮುಖ್ಯವಾಗುತ್ತದೆ.

ಆದರೆ ರೂಪದ ಮಾತನ್ನು ತೆಗೆದುಕೊಂಡರೆ ಗ್ರಂಥದ ಪೃಥಕ್ಕಾದ ಸ್ವಭಾವವು

ಲೇಖಕನ ಮೇಲೆಯೇ ಅವಲಂಬಿಸಿರುತ್ತದೆ. ಅದು ಎಲ್ಲರಿಗೂ ದೊರೆಯುವ, ಪ್ರತಿಯೊಬ್ಬನಿಗೂ ತಿಳಿದ ವಿಷಯವನ್ನು ಕುರಿತುದಾಗಿರಬಹುದು. ಆದರೆ ಕವಿ ಕಾವ್ಯವನ್ನು ಯಾವ ರೀತಿಯಲ್ಲಿ ಬರೆದಿದ್ದಾನೆ; ಅದನ್ನು ಕುರಿತ ಅವನ ಆಲೋಚನೆಗಳೇನು ಇವೇ ಕಾವ್ಯಕ್ಕೆ ಯೋಗ್ಯತೆಯನ್ನು ಕೊಡತಕ್ಕುವು. ಆ ಯೋಗ್ಯತೆಯು ಕವಿಯಿಂದಲೇ ಕಾವ್ಯಕ್ಕೆ ಉಂಟಾಗುತ್ತದೆ. ಆದುದರಿಂದ ರೂಪದ ದೃಷ್ಟಿಯಿಂದ ಒಂದು ಕಾವ್ಯವು ಅತ್ಯುತ್ತಮವಾಗಿ ಅದಕ್ಕೆ ಸಮಾನವಾದುದೇ ಇಲ್ಲದಿದ್ದರೆ ಅದರ ಕವಿಯೂ ಅದೇ ರೀತಿ ಇರುತ್ತಾನೆ. ಆದುದರಿಂದ ಕವಿಯು ಎಷ್ಟು ಕಡಿಮೆ ತನ್ನ ವಿಷಯಕ್ಕೆ ಋಣಿಯಾಗಿದ್ದಾನೋ ಅಷ್ಟರ ಮಟ್ಟಿಗೆ ಅವನ ಯೋಗ್ಯತೆಯು ಏರುತ್ತಾ ಏರುತ್ತಾ ಹೋಗುತ್ತದೆ. ಆದುದರಿಂದ ವಿಷಯವು ಹಳೆಯದಾಗಿ ಎಷ್ಟರ ಮಟ್ಟಿಗೆ ಉಪಯೋಗಿಸಲ್ಪಟ್ಟಿದೆಯೋ, ಕವಿಯು ಅಷ್ಟು ಹೆಚ್ಚು ಮಹನೀಯನಾಗುತ್ತಾನೆ. ಗ್ರೀಸಿನ ಮೂವರು ವಿಷಾದಾಂತ ನಾಟಕ ಕವಿಗಳೂ ಒಂದೇ ವಿಷಯದ ಮೇಲೆ ಕೆಲಸಮಾಡಿರುವುದೇ ಇದಕ್ಕೆ ಉದಾಹರಣೆಯಾಗಿದೆ.

ಆದುದರಿಂದ ಒಂದು ಪುಸ್ತಕವು ಪ್ರಸಿದ್ಧವಾಗಿದ್ದರೆ ಅದು ವಸ್ತುವಿಗಾಗಿ ಪ್ರಸಿದ್ಧವಾಗಿದೆಯೋ ಅಥವ ಕಾವ್ಯರೀತಿಗಾಗಿ ಪ್ರಸಿದ್ಧವಾಗಿದೆಯೋ ಎಂಬುದನ್ನು ಎಚ್ಚರಿಕೆಯಿಂದ ನೋಡಬೇಕು ಮತ್ತು ಅದಕ್ಕೆ ಅನುಸಾರವಾಗಿ ಅದನ್ನು ವಿಭಾಗಿಸಬೇಕು.

ವಸ್ತುವಿನಿಂದಲೇ ಪ್ರಸಿದ್ಧವಾದ ಗ್ರಂಥಗಳನ್ನು ಸಾಮಾನ್ಯವಾದ ಮತ್ತು ಹೆಚ್ಚು ಜ್ಞಾನಿಗಳಲ್ಲದ ಲೇಖಕರೂ ಬರೆಯಬಹುದು ಇದಕ್ಕೆ ಮುಖ್ಯ ಕಾರಣ ವಿಷಯವು ಅವರಿಗೆ ಮಾತ್ರ ದೊರೆತುದೇ ಆಗಿರುತ್ತದೆ ಇದಕ್ಕೆ ದೂರ.ದೇಶದ ಪ್ರಯಾಣಗಳನ್ನು ಕುರಿತ ಪುಸ್ತಕಗಳು, ಅಪರೂಪವಾದ ಪ್ರಕೃತಿ ಚಿತ್ರಗಳು ಅಥವ ಪ್ರಯೋಗಗಳು, ಲೇಖಕರ ಕಣ್ಣೆದುರಿಗೆ ನಡೆದ ಚರಿತ್ರಾರ್ಹವಾದ ನಡೆವಳಿಕೆಗಳು, ಅಥವ ಹಳೆಯ ಕಾಲದ ಆಧಾರಗಳಿಂದ ಅವರು ಸಂಗ್ರಹಿಸಿ ಕಷ್ಟಪಟ್ಟು ಬರೆದವು—ಇದಕ್ಕೆ ಉದಾಹರಣೆಗಳು

ಆದರೆ ವಿಷಯವು ಎಲ್ಲಿ ಎಲ್ಲರಿಗೂ ದೊರೆಯುವಂತೆ ಇದೆಯೋ, ಚೆನ್ನಾಗಿ ತಿಳಿದಿರುವುದೋ ಅಲ್ಲಿ ಎಲ್ಲವೂ ಕಾವ್ಯದ ರೂಪದ ಮೇಲೆ ಅವಲಂಬಿಸಿರುತ್ತದೆ. ಕಾವ್ಯವಸ್ತುವನ್ನು ಕುರಿತು ಕವಿಯ ಆಲೋಚನೆಗಳೇನು'ಎಂಬುದೇ ಗ್ರಂಥಕ್ಕಿರುವ ನಿಜವಾದ ಬೆಲೆ; ಇಲ್ಲಿ, ಅಂದರೆ ಹಳೆಯ ವಿಷಯಗಳನ್ನೇ ತೆಗೆದುಕೊಂಡಾಗ ನಿಜವಾಗಿ ಅಸಾಧಾರಣವಾದ ಯೋಗ್ಯತೆಯುಳ್ಳ ಮನುಷ್ಯನು ಮಾತ್ರ ಓದಲು ಅರ್ಹವಾದುದನ್ನು ಸೃಷ್ಟಿಸುತ್ತಾನೆ. ಯಾಕೆಂದರೆ ಉಳಿದವರು, ಎಲ್ಲರೂ ಏನನ್ನು ಆಲೋಚಿಸುತ್ತಾರೋ ಅದರ ಹೊರತು ಬೇರೆ ಏನನ್ನೂ ಆಲೋಚಿಸಲಾರರು. ಸಾಮಾನ್ಯ ಬರಹಗಾರರು ತಮ್ಮ ಮನಸ್ಸಿನ ಪಡಿಯಚ್ಚನ್ನೇ ತಯಾರಿಸುವರು. ಆದರೆ ಎಲ್ಲಾ ಮನಸ್ಸುಗಳಲ್ಲೂ ಇರುವುದು ಆ ಅಚ್ಚಿನ ಮೂಲವೇ.

ಇದು ಹೇಗಾದರೂ ಇರಲಿ; ಜನತೆಗೆ ರೂಪಕ್ಕಿಂತ ವಸ್ತುವೇ ಹೆಚ್ಚು ಬೇಕಾಗಿದೆ. ಆದುದರಿಂದಲೇ ಅದರ ಸಂಸ್ಕೃತಿಯು ಅಷ್ಟೇನೂ ಉಚ್ಚತರವಾದುದಾಗಿಲ್ಲ. ಕವಿತೆಯಲ್ಲಿ ಜನತೆಯು ತನ್ನ ಪಕ್ಷಪಾತವನ್ನು ಅತ್ಯಂತ ಹಾಸ್ಯಾಸ್ಪದವಾದ ರೀತಿಯಲ್ಲಿ ತೋರಿಸುತ್ತದೆ. ಯಾಕೆಂದರೆ ಜನತೆಯು ಬೇರೆ ಬೇರೆ ಕವಿಗಳ ಜೀವನದಲ್ಲಿ ಅವರ ಕಾವ್ಯಗಳಿಗೆ ಕಾರಣಗಳಾದ ಸಂದರ್ಭಗಳನ್ನೂ ನಡೆದ ಸಂಗತಿಗಳನ್ನೂ ಬೇಟೆಯಾಡುವುದರಲ್ಲೇ ತನ್ನ ಕಾಲವನ್ನೆಲ್ಲಾ ಕಳೆಯುತ್ತದೆ. ಕೊನೆಗೆ ಆ ಸಂಗತಿಗಳು ಕಾವ್ಯಕ್ಕಿಂತ ಹೆಚ್ಚು ಪ್ರಾಮುಖ್ಯತೆಯನ್ನು ಪಡೆಯುತ್ತವೆ. ಗಯಟೆ (Goethe)ಯ ಕಾವ್ಯಗಳನ್ನು ಓದುವುದಕ್ಕಿಂತ ಹೆಚ್ಚಾಗಿ ಅವನನ್ನು ಕುರಿತು ಬರೆದಿರುವ ಗ್ರಂಥಗಳನ್ನೂ, ಅವನ ಫಾಸ್ಟ್ ನಾಟಕವನ್ನು ಓದುವುದಕ್ಕಿಂತ ಹೆಚ್ಚಾಗಿ ಫಾಸ್ಟನ ಕಟ್ಟುಕಥೆಯನ್ನೂ ಜನರು ಕಷ್ಟಪಟ್ಟು ವ್ಯಾಸಂಗ ಮಾಡುತ್ತಾರೆ. ಬರ್ಗರ್‌ನು (Berger) ಲಿಯೋನರಾ ಯಾರು ಎಂಬ ವಿಷಯದಲ್ಲಿ ವಿದ್ವಾಂಸರು ದೊಡ್ಡ ದೊಡ್ಡ ಪ್ರಬಂಧಗಳನ್ನು ಬರೆಯಬಲ್ಲರೆಂದು ಹೇಳಿದುದು ಗಯಟೆಯ ವಿಚಾರದಲ್ಲಿ ಅಕ್ಷರಶಃ ನಡೆದುದು ನಮಗೆ ಕಾಣುತ್ತದೆ. ಯಾಕೆಂದರೆ ಅನೇಕ ವಿದ್ವಾಂಸರು ಗಯಟೆಯ ಫಾಸ್ಟನ ಕಟ್ಟುಕಥೆಯ ಮೇಲೆ ನೂರಾರು ವಿದ್ವತ್ಪೂರ್ಣವಾದ ಪ್ರಬಂಧಗಳನ್ನು ಬರೆದಿದ್ದಾರೆ. ಈ ಬಗೆಯ ವ್ಯಾಸಂಗವು ನಾಟಕದ ವಸ್ತುವಿಗೆ ಮಾತ್ರ ಸೇರಿದುದಾಗಿದೆ. ಮುಂದೆಯೂ ಹಾಗೆಯೇ ಆಗುವುದು. ರೂಪವನ್ನು ಬಿಟ್ಟು ವಿಷಯಕ್ಕೆ ಇಷ್ಟು ಪ್ರಾಶಸ್ತ್ಯವನ್ನು ಕೊಡುವುದು ಬಹಳ ಅಂದವಾದ ಯುಟ್ರೇಹಿಯ ಕಲಶವನ್ನು ಕಂಡು ಅದರ ಆಕೃತಿ ಮತ್ತು ಬಣ್ಣಕ್ಕಾಗಿ ಆನಂದಿಸುವ ಬದಲು ಆ ಮಣ್ಣು ಯಾವುದು, ಆ ಬಣ್ಣ ಯಾವುದು ಮುಂತಾಗಿ ಅದನ್ನು ರಸಾಯನಶಾಸ್ತ್ರ ರೀತಿ ಪರೀಕ್ಷೆ ಮಾಡಿದಂತೆ ಆಗುತ್ತದೆ.

ಯಾವ ಸಾಹಿತ್ಯಭಾಗದಲ್ಲಿ ಇರಬಹುದಾದ ಯೋಗ್ಯತೆಯು ಕೇವಲ ರೂಪದಲ್ಲಿ ಮಾತ್ರವೇ ಇರಬಹುದೋ ಅಲ್ಲಿ ಅಂದರೆ ಕಾವ್ಯದಲ್ಲಿ ವಸ್ತುವಿನ ಮೂಲಕ ಜನರ ಮನಸ್ಸನ್ನು ಎಳೆಯುವ ಈ ಕೆಟ್ಟ ಅಭ್ಯಾಸವು ನಿಂದಾರ್ಹವಾದುದು. ಇಷ್ಟಾದರೂ ಅಯೋಗ್ಯರಾದ ನಾಟಕಕಾರರು ತಾವು ಬರೆಯುವ ವಸ್ತುವಿನಿಂದಲೇ ನಾಟಕ ಗೃಹವು ಕಿಕ್ಕಿರಿದು ತುಂಬುವಂತೆ ಮಾಡುವುದು ಅಪರೂಪವಲ್ಲ. ಉದಾಹರಣೆಗಾಗಿ, ಈ ಬಗೆಯ ಲೇಖಕರು ಜೀವನದಲ್ಲಿ ನಾಟಕಕ್ಕೆ ಅರ್ಹವಾದ ವಸ್ತುವಲ್ಲದಿದ್ದರೂ, ಪ್ರಸಿದ್ಧಿಯನ್ನು ಪಡೆದ ಯಾವ ಮನುಷ್ಯನನ್ನೂ ರಂಗದ ಮೇಲೆ ತರಲು ಹಿಂದೆಗೆಯುವುದಿಲ್ಲ; ಕೆಲವು ಸಮಯದಲ್ಲಿಯಂತೂ ಅವನ ಸಮೀಪದ ಆಪ್ತ ಬಂಧುಗಳು ಸಾಯುವ ವರೆಗೆ ಸಹ ಅವರು ಸುಮ್ಮನಿರುವುದಿಲ್ಲ.

ಇಲ್ಲಿ ನಾನು ಹೇಳುತ್ತಿರುವ ರೂಪಕ್ಕೂ ವಿಷಯಕ್ಕೂ ಇರುವ ವ್ಯತ್ಯಾಸವು ಸಂಭಾಷಣೆಗೂ ಅನ್ವಯಿಸುತ್ತದೆ. ಮನುಷ್ಯನು ಚೆನ್ನಾಗಿ ಮಾತನಾಡಲು ಅವನಿಗೆ

ಯೋಗ್ಯತೆಯನ್ನು ಕೊಡತಕ್ಕ ಮುಖ್ಯ ಗುಣಗಳು ಬುದ್ಧಿ, ವಿವೇಕ, ರಸಿಕತೆ ಮತ್ತು ಉಲ್ಲಾಸ. ಈ ಗುಣಗಳು ಸಂಭಾಷಣೆಯ ರೂಪವನ್ನು ಒದಗಿಸುತ್ತವೆ. ಒಬ್ಬ ಮನುಷ್ಯನೊಡನೆ ಸ್ವಲ್ಪ ಹೊತ್ತು ಮಾತನಾಡುವುದರೊಳಗಾಗಿ ಅವನ ಮಾತಿನ ವಸ್ತುವಿನ ಕಡೆ ಗಮನ ಕೊಡಬೇಕು. ಅಂದರೆ ಯಾವ ವಿಷಯದ ಮೇಲೆ ಅವನೊಂದಿಗೆ ಮಾತನಾಡಲು ಸಾಧ್ಯವೋ ಅದರಲ್ಲಿ ಅವನ ಜ್ಞಾನವನ್ನು ತಿಳಿಯ ಬೇಕು. ಈ ಜ್ಞಾನವು ಬಹಳ ಕಡಿಮೆ ಇದ್ದರೆ ಅವನ ಸಂಭಾಷಣೆಯು ಅಷ್ಟೇನೂ ಬೆಲೆಯುಳ್ಳದುದಾಗಿರುವುದಿಲ್ಲ. ಆಗ ಅದು ಬೆಲೆಯುಳ್ಳದುದಾಗಬೇಕಾದರೆ ಅವನಲ್ಲಿ ಮೇಲೆ ಹೇಳಿದ ಬುದ್ಧಿ, ವಿವೇಕ, ರಸಿಕತೆ, ಉಲ್ಲಾಸ ಈ ನಾಲ್ಕು ಗುಣಗಳು ಬಹಳ ಪಕ್ವವಾದ ರೀತಿಯಲ್ಲಿ ಅಸಾಧಾರಣವಾಗಿ ನೆಲಸಿರಬೇಕು. ಯಾಕೆಂದರೆ ಎಲ್ಲರಿಗೂ ತಿಳಿದಿರುವ ಜೀವನದ ಸಾಮಾನ್ಯ ನಡವಳಿಕೆಗಳನ್ನು ಕುರಿತು, ಮಾತಾಡಲು ಅವನಿಗೆ ಬೇರೆ ಏನೂ ತಿಳಿದಿರುವುದಿಲ್ಲ. ಆದರೆ ಮನುಷ್ಯನಲ್ಲಿ ಮೇಲೆ ಹೇಳಿದ ನಾಲ್ಕು ಬಾಹ್ಯ ಗುಣಗಳು ಕಡಿಮೆಯಾಗಿದ್ದರೂ ಚಿಂತೆಯಿಲ್ಲ. ಆದರೆ ಅವನ ಮಾತಿಗೆ ಬೆಲೆ ತರುವ ಜ್ಞಾನವು ಅವನಲ್ಲಿ ಅಧಿಕವಾಗಿದ್ದರೆ ಅವನ ಸಂಭಾಷಣೆಯು ಸ್ವಾರಸ್ಯ ವಾಗಿರುತ್ತದೆ. ಆಗ ಅವನ ಸಂಭಾಷಣೆಯ ಬೆಲೆಯು ಪೂರ್ಣವಾಗಿ ಅವನ ವಿಷಯದ ಮೇಲೆಯೇ ಅವಲಂಬಿಸಿರುತ್ತದೆ ಯಾಕೆಂದರೆ ಸ್ಪಾನಿಷ್ ಗಾದೆಯು ಹೇಳುವಂತೆ "ಜ್ಞಾನಿಗೆ ಇತರರ ವಿಷಯ ಗೊತ್ತಿರುವುದಕ್ಕಿಂತ ಹೆಚ್ಚಾಗಿ ಮೂರ್ಖ ನಿಗೆ ತನ್ನ ವಿಷಯ ಗೊತ್ತಿದೆ"

# ತನ್ನಷ್ಟಕ್ಕೆ ತಾನು ಆಲೋಚನೆ ಮಾಡುವುದು

೨

ಪುಸ್ತಕಾಲಯವು ಬಹಳ ದೊಡ್ಡದಾಗಿಯೇ ಇರಬಹುದು. ಆದರೆ ಅದು ಅವ್ಯವಸ್ಥೆಯಿಂದಿದ್ದರೆ ಚಿಕ್ಕದಾದರೂ ವ್ಯವಸ್ಥಿತವಾದ ಭಂಡಾರದಷ್ಟು ಉಪಯೋಗವಾಗುವುದಿಲ್ಲ. ಹಾಗೆಯೇ ಒಬ್ಬ ಮನುಷ್ಯನಲ್ಲಿ ಜ್ಞಾನವು ಹೆಚ್ಚಾಗಿ ಇರಬಹುದು. ಆದರೆ ಅವನು ಚೆನ್ನಾಗಿ ಆಲೋಚನೆ ಮಾಡಿ ಅದನ್ನು ವ್ಯವಸ್ಥಿತವಾಗಿ ಮಾಡಿಕೊಳ್ಳದಿದ್ದರೆ, ಅವನು ಚೆನ್ನಾಗಿ ಆಲೋಚನೆ ಮಾಡಿರುವ ಅಲ್ಪ ಸ್ವಲ್ಪ ಜ್ಞಾನಕ್ಕಿಂತಲೂ ಆ ಜ್ಞಾನವು ಅವನಿಗೆ ಕಡಿಮೆ ಬೆಲೆಯುಳ್ಳದುದಾಗುತ್ತದೆ. ಯಾಕೆಂದರೆ ಮನುಷ್ಯನು ತನ್ನ ಜ್ಞಾನವನ್ನು ಎಲ್ಲಾ ಕಡೆಯಿಂದಲೂ ನೋಡಿ, ಸತ್ಯವನ್ನು ಸತ್ಯದೊಂದಿಗೆ ಹೋಲಿಸಿ, ತನಗೆ ತಿಳಿದುದನ್ನೆಲ್ಲಾ ಒಟ್ಟಾಗಿ ಸೇರಿಸಿದಾಗ ಮಾತ್ರ ಆ ಜ್ಞಾನದ ಮೇಲೆ ಅಧಿಕಾರವನ್ನು ಹೊಂದಿ ಅದನ್ನು ತನ್ನ ಹಿಡಿತಕ್ಕೆ ಸಿಕ್ಕಿಸಿಕೊಳ್ಳುತ್ತಾನೆ. ವಿಷಯದ ಜ್ಞಾನವಿಲ್ಲದಿದ್ದರೆ ಯಾವುದನ್ನೂ ಮನಸ್ಸಿನಲ್ಲಿ ತಿರಿವಿಹಾಕಲು ಸಾಧ್ಯವಿಲ್ಲ. ಆದುದರಿಂದ ಅವನು ಯಾವುದಾದರೂ ವಿಷಯವನ್ನು ಮೊದಲು ತಿಳಿಯಬೇಕು ಅಂದರೆ ಅವನಿಗೆ ಯಾವುದಾದರೂ ಒಂದು ವಿಷಯವು ತಿಳಿದಿದೆ ಎಂದು ಹೇಳಬೇಕಾದರೆ ಅವನು ಆ ಭಾಗವನ್ನು ಮನಸ್ಸಿನಲ್ಲ ಚೆನ್ನಾಗಿ ತಿರುವಿ ಹಾಕಿರಬೇಕು

ಓದುವುದು ಮತ್ತು ಬರೆಯುವುದು ಯಾರು ಬೇಕಾದರೂ ಸ್ವಂತ ಇಚ್ಛೆಯಿಂದ ಮಾಡಬಹುದಾದ ಕೆಲಸ. ಆದರೆ ಆಲೋಚನೆ ಮಾಡುವುದು ಹಾಗಲ್ಲ. ಗಾಳಿಯು ಬೆಂಕಿಯನ್ನು ಹುರಿದುಂಬಿಸುವಂತೆ ಆಲೋಚನೆಯನ್ನು ಹತ್ತಿಸಬೇಕು. ಕೈಯಲ್ಲಿರುವ ವಿಷಯದ ಉತ್ಸಾಹದಿಂದ ಅದು ನಿಲ್ಲಬೇಕು. ಆ ಉತ್ಸಾಹವು ವಸ್ತುವಿಗೆ ಸಂಬಂಧಪಟ್ಟುದಾಗಿರಬಹುದು. ಇಲ್ಲವೆ ಮನಸ್ಸಿಗೆ ಸಂಬಂಧಪಟ್ಟುದಾಗಿರಬಹುದು. ಎರಡನೆಯದು ನಮ್ಮ ವ್ಯಕ್ತಿತ್ವಕ್ಕೆ ಅನ್ವಯಿಸುವಾಗ ಮಾತ್ರ ಪ್ರಾಬಲ್ಯಕ್ಕೆ ಬರುತ್ತದೆ. ವಸ್ತುವಿನಲ್ಲಿ ಉತ್ಸಾಹವು, ಸ್ವಾಭಾವಿಕವಾಗಿ ಆಲೋಚನೆ ಮಾಡತಕ್ಕ ಬುದ್ಧಿಗಳಿಗೆ ಮಾತ್ರ ಸೇರಿದುದು ಅವರಿಗೆ ಆಲೋಚನೆ ಮಾಡುವುದು ಉಸಿರಾಡುವಷ್ಟೆ ಸ್ವಾಭಾವಿಕವಾದುದು. ಅಂತಹವರು ಬಹಳ ವಿರಳ.

ಬರಿಯ ಓದಿನೊಂದಿಗೆ ಹೋಲಿಸಿದರೆ, ಆಲೋಚನೆಯಿಂದ ಮನುಷ್ಯನ ಮನಸ್ಸಿನ ಮೇಲೆ ಎಂತಹ ಪರಿಣಾಮವುಂಟಾಗುವುದೆಂಬುದು ಆಶ್ಚರ್ಯಕರವಾದುದು. ಆಲೋಚಿಸುವ ಸ್ವಭಾವವುಳ್ಳ ಮನಸ್ಸಿಗೂ, ಓದುವ ಸ್ವಭಾವವುಳ್ಳ ಮನಸ್ಸಿಗೂ ಇರುವ ವ್ಯತ್ಯಾಸವನ್ನು ಅದು ಮುಂದುವರಿಸಿ ಸ್ಪಷ್ಟವಾಗಿ ತೋರಿಸುತ್ತದೆ. ನನ್ನ ಅಭಿಪ್ರಾಯವೇನೆಂದರೆ

ಓದು ಜೇನು ಮೇಣದ ಮೇಲೆ ಒತ್ತುವ ಮುದ್ರೆ ಯಾವ ರೀತಿ ಪೂರ್ಣವಾಗಿ ಬೇರೆಯಾದುದೋ ಹಾಗೆಯೇ ಆಗಣ ನಮ್ಮ ಮನೋಭಾವಕ್ಕೆ ಬೇರೆ ಬೇರೆಯಾದ ಯೋಚನೆಗಳನ್ನು ಬಲಾತ್ಕಾರವಾಗಿ ನಮ್ಮ ಮನಸ್ಸಿಗೆ ತೂರುತ್ತದೆ. ಹೀಗೆ ಓದುವಾಗ ನಮ್ಮ ಮನಸ್ಸು ಪೂರ್ಣವಾಗಿ ಹೊರಗಿನ ಬಲಾತ್ಕಾರಕ್ಕೆ ಒಳಗಾಗಿರುತ್ತದೆ. ಆ ಗಳಿಗೆಯಲ್ಲಿ ಅದಕ್ಕೆ ಸ್ವಲ್ಪವೂ ಇಷ್ಟವಿಲ್ಲದೆ ಇದ್ದರೂ, ಓದು ಮನಸ್ಸನ್ನು ಅನೇಕ ವಿಷಯಗಳ ಮೇಲೆ ಆಲೋಚಿಸಲು ಬಲಾತ್ಕರಿಸುತ್ತದೆ.

ಆದರೆ ಒಬ್ಬ ಮನುಷ್ಯನು ತನ್ನಷ್ಟಕ್ಕೆ ತಾನು ಆಲೋಚಿಸುವಾಗ ಅವನು ತನ್ನ ಮನಸ್ಸಿನ ಪ್ರೇರಣೆಯನ್ನೇ ಅನುಸರಿಸುತ್ತಾನೆ. ಆ ಪ್ರೇರಣೆಯು ಆಗಣ ಅವನ ಪರಿಸ್ಥಿತಿಯಿಂದಲೋ ಅಥವಾ ಯಾವುದಾದರೂ ಒಂದು ಜ್ಞಾಪಕದಿಂದಲೋ ಉಂಟಾಗಿರುತ್ತದೆ ಮನುಷ್ಯನ ಸುತ್ತ ಕಣ್ಣಿಗೆ ಕಾಣುವ ಪ್ರಪಂಚವು, ಓದುವುದು ಮಾಡುವಂತೆ ಅವನ ಮನಸ್ಸಿನ ಮೇಲೆ ಯಾವ ಸ್ಪಷ್ಟವಾದ ಯೋಚನೆಯನ್ನೂ ಒತ್ತುವುದಿಲ್ಲ. ಆದರೆ ಅವನ ಸ್ವಭಾವಕ್ಕೂ ಆಗಿನ ಅವನ ಮನೋಭಾವಗಳಿಗೂ ಅನುಗುಣವಾದ ಆಲೋಚನೆಗಳನ್ನು ಪ್ರೇರಿಸುವ ವಿಷಯವನ್ನೂ ಸಂದರ್ಭವನ್ನೂ ಉಂಟುಮಾಡುತ್ತದೆ ಆದುದರಿಂದಲೇ ಅತಿಯಾಗಿ ಓದುವುದರಿಂದ ಮನಸ್ಸು ಚಿಕ್ಕದು ದೊಡ್ಡದು ಆಗುವ—ಸ್ವಾಭಾವಿಕವಾದ ಬೆಳವಣಿಗೆಯ—ಶಕ್ತಿಯನ್ನು ಕಳೆದುಕೊಳ್ಳುತ್ತದೆ ತನ್ನ ಸ್ವಂತ ಆಲೋಚನೆಗಳು ಇಲ್ಲದಂತೆ ಮಾಡಿಕೊಳ್ಳಲು ಅತ್ಯಂತ ಸಮರ್ಪಕವಾದ ದಾರಿ ಯಾವುದೆಂದರೆ ಕೆಲಸವಿಲ್ಲದಾಗಲೆಲ್ಲಾ ಮತ್ತೊಬ್ಬನ ಪುಸ್ತಕಗಳನ್ನು ಓದುವುದಕ್ಕೆ ತೆಗೆದುಕೊಳ್ಳುವುದೇ. ಪಾಂಡಿತ್ಯವು ಅನೇಕರನ್ನು ಅವರು ಸ್ವಾಭಾವಿಕವಾಗಿ ಇರುವುದಕ್ಕಿಂತ ಅಜ್ಞಾನಿಗಳಾಗಿಯೂ ಮೂರ್ಖರಾಗಿಯೂ ಮಾಡಿ ಅವರ ಬರವಣಿಗೆಗಳು ಸ್ವಲ್ಪವೂ ಫಲಕಾರಿಯಾಗದಿರುವ ಕಾರಣವು ಇದರಿಂದ ಸ್ಪಷ್ಟವಾಗುತ್ತದೆ. ಅವರು ಪೋಪ್‌ನ ಮಾತುಗಳಲ್ಲಿ "ಯಾವಾಗಲೂ ಓದುತ್ತಾ ಎಂದಿಗೂ ಓದಲ್ಪಡಲು ಅರ್ಹರಾಗದೆ ಉಳಿಯುತ್ತಾರೆ".

ಪುಸ್ತಕಗಳ ಪುಟಗಳಲ್ಲಿ ತಮ್ಮ ವ್ಯಾಸಂಗವನ್ನು ನಡೆಸಿರುವವರೇ ಪಂಡಿತರು. ಆದರೆ ಪ್ರಕೃತಿಯ ಪುಸ್ತಕವನ್ನು ನೇರವಾಗಿ ಹೊಗುವವರೇ ಆಲೋಚನಾಪರರು ಮತ್ತು ಪ್ರತಿಭಾಶಾಲಿಗಳು. ಪ್ರಪಂಚಕ್ಕೆ ಜ್ಞಾನದ ಬೆಳಕನ್ನು ಕೊಟ್ಟು ಅದನ್ನು ಮುಂದಕ್ಕೆ ನಡೆಸಿಕೊಂಡು ಹೋಗುವವರೇ ಅವರು.

ಮನುಷ್ಯನ ಆಲೋಚನೆಗಳಲ್ಲಿ ಸತ್ಯವೂ ಚೈತನ್ಯವೂ ಇರಬೇಕಾದರೆ, ಅವು ಅವನ ಆಜನ್ಮ ಆಲೋಚನೆಗಳಾಗಿರಬೇಕು. ಏಕೆಂದರೆ ಅವನಿಗೆ ಪೂರ್ಣವಾಗಿ ತಿಳಿಯತಕ್ಕುದು ಅವು ಮಾತ್ರ ಇತರರ ಆಲೋಚನೆಗಳನ್ನು ಓದುವುದು, ಕರೆಯಿಸಿಕೊಳ್ಳದೆ ಹೋಗಿ ಮತ್ತೊಬ್ಬನು ತಿಂದುಬಿಟ್ಟಿರುವ ಅಶನ ಎಂಜಲನ್ನು ತಿಂದ ಹಾಗೆ: ಅಥವ ಗುರುತಿಲ್ಲದ ಪ್ರವಾಸಿಯು ಬಿಟ್ಟುಹೋಗಿರುವ ಬಟ್ಟೆಗಳನ್ನು ಧರಿಸುವ ಹಾಗೆ; ವಸಂತ

ದಲ್ಲಿ ಹೊಸದಾಗಿ ಅರಳುವ ಹೂವಿಗೆ ಸಾವಿರಾರು ಶತಮಾನಗಳ ಹಿಂದಲ ಗಿಡಗಳ ಪ್ರಸ್ತರದ ಗುರುತು ಯಾವ ರೀತಿಯಾದ ಸಂಬಂಧವುಳ್ಳದೋ—ಅಂದರೆ ಹೇಗೆ ಯಾವ ಸಂಬಂಧವೂ ಇಲ್ಲವೊ—ನಾವು ಓದುವ ಆಲೋಚನೆಗಳಿಗೂ ನಮ್ಮ ಸ್ವಂತ ಆಲೋಚನೆಗಳಿಗೂ ಇದೇ ವಿಧವಾದ ಸಂಬಂಧವಿರುವುದು.

ಓದುವುದು, ಸ್ವಂತ ಆಲೋಚನೆಗಳಿಗೆ ಪ್ರತಿಯೇ ಹೊರತು ಮತ್ತೇನೂ ಇಲ್ಲ; ಅಂದರೆ ಬೇರೆ ಸೂತ್ರಗಳ ಕೈಯಲ್ಲಿ ಮನಸ್ಸನ್ನು ಕೊಡುವುದೆಂದು ಅರ್ಥ. ಅಸಂಖ್ಯಾತಗಳಾದ ಪುಸ್ತಕಗಳು, ಇರತಕ್ಕ ತಪ್ಪು ದಾರಿಗಳನ್ನೂ ಮತ್ತು ಅವುಗಳನ್ನು ಅನುಸರಿಸಿದರೆ ಮನುಷ್ಯನು ಹೇಗೆ ದಾರಿತಪ್ಪಿ ಹೋಗಬಹುದು ಎಂಬುದನ್ನೂ ತೋರಿಸಲು ಮಾತ್ರ ಸಹಕಾರಿಗಳಾಗುತ್ತವೆ. ಆದರೆ ಪ್ರತಿಭಾವಂತನು, ತನ್ನಷ್ಟಕ್ಕೆ ತಾನು ಆಲೋಚಿಸುವವನು, ಸ್ವಭಾವದಿಂದ ಸ್ಪಷ್ಟವಾದ ಆಲೋಚನೆಗಳುಳ್ಳವನು ಮಾತ್ರ, ಸರಿಯಾದ ದಾರಿಯಲ್ಲಿ ನಡೆದುಕೊಂಡು ಹೋಗುವ ದಿಗ್ದರ್ಶನವುಳ್ಳವನಾಗಿರುತ್ತಾನೆ. ತನ್ನ ಮೂಲದಲ್ಲಿ ತನ್ನ ಆಲೋಚನೆಗಳು ನಿಂತುಹೋದಾಗ ಮಾತ್ರ ಮನುಷ್ಯನು ಇತರರ ಗ್ರಂಥಗಳನ್ನು ಓದಬೇಕು. ತನ್ನ ಆಲೋಚನೆಗಳು ನಿಂತುಹೋಗುವುದು ಅತ್ಯುತ್ತಮವಾದ ಮನಸ್ಸುಗಳಿಗೂ ಆಗಾಗ್ಗೆ ಸಂಭವಿಸುತ್ತದೆ ಹಾಗಲ್ಲದೆ ತನ್ನ ಸ್ವಂತ ಯೋಚನೆಗಳನ್ನು ಓಡಿಸಲು ಇತರರ ಪುಸ್ತಕಗಳನ್ನು ತೆಗೆದುಕೊಳ್ಳುವುದು, ದೇವರಿಗೆ ವಿರೋಧವಾಗಿ ಪಾಪ ಮಾಡಿದಂತೆ. ಅದು, ಗಿಡಗಳನ್ನು ನೋಡಬೇಕೆಂದು, ಪ್ರಕೃತಿಯನ್ನು ಬಿಟ್ಟು ಪ್ರದರ್ಶನ ಶಾಲೆಗೆ ಓಡಿದಂತೆ; ಅಥವ ಪ್ರಕೃತಿಯ ಅಂದವನ್ನು ಚಿತ್ರಿಸಿರುವ ಹಿತ್ತಾಳೆಯ ತಗಡನ್ನು ನೋಡಿದಂತೆ.

ಒಬ್ಬ ಮನುಷ್ಯನು ಬಹುಕಾಲ ಯೋಚಿಸಿ, ಶ್ರಮಪಟ್ಟು ಚೂರಿಗೆ ಚೂರನ್ನು ಸೇರಿಸಿ ಒಂದು ಸತ್ಯದ ಅಂಶವನ್ನು ಕಂಡುಹಿಡಿಯಬಹುದು. ಮತ್ತು ಅನೇಕ ವೇಳೆ ಆ ಜ್ಞಾನವು ಅವನಿಗೆ ಸುಲಭವಾಗಿ ಯಾವುದಾದರೂ ಪುಸ್ತಕದಲ್ಲಿ ದೊರೆಯುವ ಸಂಭವವಿದ್ದಿರಬಹುದು. ಪುಸ್ತಕವನ್ನು ಓದಿದ್ದರೆ ಅವನು ಆ ಕಷ್ಟಗಳನ್ನೆಲ್ಲಾ ತಪ್ಪಿಸಿಕೊಳ್ಳಬಹುದಾಗಿತ್ತು. ಹಾಗಿದ್ದರೂ ಕೂಡ ಅವನು ತಾನು ಯೋಚನೆ ಮಾಡಿ—ತನ್ನ ಅನುಭವದಿಂದ—ಆ ಜ್ಞಾನವನ್ನು ಕಂಡುಹಿಡಿದಿದ್ದರೆ, ಅದು ಅವನಿಗೆ ಪುಸ್ತಕಜ್ಞಾನಕ್ಕಿಂತ ನೂರರಷ್ಟು ಸಾವಿರದಷ್ಟು ಹೆಚ್ಚು ಬೆಲೆಯಾದುದು. ಯಾಕೆಂದರೆ, ನಾವು ಜ್ಞಾನವನ್ನು ಹಾಗೆ ಸಂಪಾದಿಸಿದಾಗ ಮಾತ್ರ ಅದು ನಮ್ಮ ದೇಹದ ಒಂದು ಅಂಗವಾಗಿ ನಮ್ಮ ಯೋಚನೆಗಳೊಡನೆ ಒಂದಾಗಿ ಸೇರುತ್ತದೆ. ನಮಗೆ ತಿಳಿದುದರೊಂದಿಗೆ ಅದರ ಸಂಬಂಧವು ಪೂರ್ಣವೂ ಭದ್ರವೂ ಆಗುತ್ತದೆ; ಆಗ ಮಾತ್ರ ಆದಕ್ಕೆ ಸಂಬಂಧಪಟ್ಟ ಕಾರಣಗಳೂ ಪರಿಣಾಮಗಳೂ ಚೆನ್ನಾಗಿ ಮನಸ್ಸಿಗೆ ಹಿಡಿಯುತ್ತವೆ. ಅದು ನಮ್ಮ ಯೋಚನೆಯ ದಾರಿಯ ವೈಶಿಷ್ಟ್ಯ-ಛಾಯೆ-ಬಣ್ಣಗಳುಳ್ಳದಾಗುತ್ತದೆ. ಆ ಜ್ಞಾನವು

ನಮಗೆ ಬೇಕಾದಾಗ ಸರಿಯಾದ ಕಾಲಕ್ಕೆ ನಮ್ಮಲ್ಲಿಗೆ ಬರುತ್ತದೆ. ಅದು ನಮ್ಮ ಮನಸ್ಸಿಗೆ ಚೆನ್ನಾಗಿ ನಾಟಿಕೊಂಡು ಎಂದೆಂದಿಗೂ ಮರೆಯದೆ ಇರುತ್ತದೆ. "ನಮ್ಮ ಆಸ್ತಿಯು ನಮ್ಮ ಸ್ವಾಧೀನಕ್ಕೆ ಬರುವ ರೀತಿಯಲ್ಲಿ", ನಾವು ಜ್ಞಾನವನ್ನು ಸಂಪಾದಿಸಬೇಕೆಂಬ ಗಯಟೆಯವರ ಮಾತಿಗೆ ಇದೇ ಅರ್ಥ.

ಯೋಚಿಸುವ ಮನುಷ್ಯನು ಮೊದಲು ತನ್ನ ಅಭಿಪ್ರಾಯಗಳನ್ನು ತನ್ನಲ್ಲಿ ಸ್ಪಷ್ಟಪಡಿಸಿಕೊಳ್ಳುತ್ತಾನೆ. ಅನಂತರ ಅವುಗಳಿಗೆ ಆಧಾರಗಳನ್ನು ತಿಳಿದುಕೊಳ್ಳುತ್ತಾನೆ. ಆಗ ಆ ಆಧಾರಗಳು, ಅವುಗಳಲ್ಲೂ ತನ್ನಲ್ಲೂ ಅವನ ನಂಬಿಕೆಯನ್ನು ಬಲಪಡಿಸುತ್ತವೆ. ಆದರೆ ಪುಸ್ತಕದ ವೇದಾಂತಿಯು ಆಧಾರದಿಂದಲೇ ಪ್ರಾರಂಭಿಸುತ್ತಾನೆ. ಅವನು ಇತರರ ಪುಸ್ತಕಗಳನ್ನು ಓದುತ್ತಾನೆ ಅವರ ಭಾವಗಳನ್ನೆಲ್ಲಾ ಒಟ್ಟುಗೂಡಿಸುತ್ತಾನೆ. ಅವುಗಳಿಂದ ಒಂದು ಅಭಿಪ್ರಾಯವನ್ನು ಸ್ಪಷ್ಟಪಡಿಸಿಕೊಳ್ಳುತ್ತಾನೆ. ಅದು ರಕ್ತಮಾಂಸಗಳೂ ಜೀವವೂ ಇಲ್ಲದ ಗೊಂಬೆಯಂತೆ ಇರುತ್ತದೆ. ಅದಕ್ಕೆ ಬದಲಾಗಿ ತಾನೇ ಯೋಚಿಸುವವನು, ಪ್ರಕೃತಿಯು ಮಾಡುವಂತೆ ಜೀವವುಳ್ಳ ಮನುಷ್ಯನನ್ನು ಸೃಷ್ಟಿಸುತ್ತಾನೆ. ಯಾಕೆಂದರೆ ಮನುಷ್ಯನಂತೆಯೇ ಅವನ ಕೃತಿಯೂ ಸೃಷ್ಟಿಸಲ್ಪಡುತ್ತದೆ. ಯೋಚಿಸುವ ಮನಸ್ಸು ಹೊರಗಿನಿಂದ ಗರ್ಭಧಾರಣೆ ಮಾಡಿ ತನ್ನ ಮಗುವನ್ನು ಸೃಷ್ಟಿಸಿ ಹೊರಗೆಡಹುತ್ತದೆ.

ನಾವು ಯಾವ ಸತ್ಯವನ್ನು ಹೊರಗಿನಿಂದ ಸುಮ್ಮನೆ ಕಲಿಯುತ್ತೇವೆಯೋ ಅದು ಕೃತಕವಾದ ಅವಯವದಂತೆ; ಕೃತಕವಾದ ಹಲ್ಲು ಅಥವ ಮೇಣದ ಮೂಗಿನಂತೆ ಅಥವ ಮತ್ತೊಬ್ಬನ ಚರ್ಮದಿಂದ ಮಾಡಿದ ಮೂಗಿನಂತೆ ಅದು ಅಲ್ಲಿ ಅಂಟಿಕೊಂಡಿರುವುದು ಅದನ್ನು ಅಲ್ಲಿ ಇಟ್ಟಿರುವುದರಿಂದ. ಆದರೆ ನಮ್ಮ ಸ್ವಂತ ಆಲೋಚನೆಗಳಿಂದ ಸಂಪಾದಿಸಿದ ಸತ್ಯವು, ನಮ್ಮ ಸ್ವಂತ ಅವಯವದ ಹಾಗೆ. ಅದೇ ನಿಜವಾಗಿಯೂ ನಮಗೆ ಸೇರಿದುದು. ಯೋಚಿಸುವವನಿಗೂ ಬರಿಯ ಪಂಡಿತನಿಗೂ-ವಿದ್ವಾಂಸನಿಗೂ ಇದೇ ಮುಖ್ಯವಾದ ವ್ಯತ್ಯಾಸ ಆಲೋಚನೆ ಮಾಡುವ ಮನುಷ್ಯನ ಬುದ್ಧಿಯ ಸಾಧನೆಗಳು ಚೆನ್ನಾಗಿ ಬರೆದ ಚಿತ್ರಪಟಕ್ಕೆ ಸಮಾನವಾಗಿರುತ್ತವೆ. ಅದರಲ್ಲಿ ಬೆಳಕೂ, ಛಾಯೆಗಳೂ ಸರಿಯಾಗಿರುತ್ತವೆ. ರೀತಿ ಗಂಭೀರವಾಗಿರುತ್ತದೆ. ಬಣ್ಣ ಪೂರ್ಣವಾಗಿ ತಪ್ಪಿಲ್ಲದೆ ಸಮವಾಗಿರುತ್ತದೆ. ಅದು ಜೀವಕ್ಕೆ ಅನುಗುಣವಾಗಿರುತ್ತದೆ. ಆದರೆ ಬರಿಯ ವಿದ್ಯಾವಂತನಾದ ಮನುಷ್ಯನ ಸಾಧನೆಯು ಒಂದು ಬಣ್ಣದ ಕುಡಿಕೆಯಂತೆ. ಅದರ ಅತ್ಯುತ್ತಮವಾದ ಕೆಲಸ ಬಣ್ಣಗಳನ್ನು ವ್ಯವಸ್ಥಿತವಾಗಿ ಇಟ್ಟಿರುವುದು. ಆದರೆ ಅದರಲ್ಲಿ ಸಮರಸವಾಗಲಿ ಪರಸ್ಪರ ಸಂಬಂಧವಾಗಲಿ ಅರ್ಥವಾಗಲಿ ಇರುವುದಿಲ್ಲ.

ಓದುವುದು, ತನ್ನ ತಲೆಯನ್ನು ಬಿಟ್ಟು ಇತರರ ತಲೆಯಿಂದ (ಬುದ್ಧಿಯಿಂದ) ಆಲೋಚಿಸಿದಂತೆ. ತನ್ನ ಬುದ್ಧಿಯ ಮೂಲಕ ಯೋಚಿಸುವುದೆಂದರೆ ಸಕಾರಣವಾದ

ಒಂದು ಪೂರ್ಣವಾದ ಆಲೋಚನೆಯ ಕ್ರಮವನ್ನು ಬೆಳಸಿಕೊಳ್ಳುವುದೆಂದು ಅರ್ಥ. ಈ ಕ್ರಮವು ಪೂರ್ಣವಾಗಿ ಇಲ್ಲದಿದ್ದರೂ ಚಿಂತೆಯಿಲ್ಲ. ಬಿಡದೆ ಇತರರ ಪುಸ್ತಕಗಳನ್ನು ಓದುವುದರಿಂದ ಉಂಟಾಗುವ ಅವರ ಆಲೋಚನಾಪ್ರವಾಹದಂತೆ ಮತ್ತಾವುದೂ ಸ್ವಂತ ಆಲೋಚನೆಗಳನ್ನು ತಡೆಗಟ್ಟುವುದಿಲ್ಲ. ಬೇರೆ ಬೇರೆ ಮನಸ್ಸುಗಳಿಂದ ಬರುವ, ಬೇರೆ ಬೇರೆ ಕ್ರಮಗಳಿಗೂ ಶಾಸ್ತ್ರಗಳಿಗೂ ಸೇರಿದ, ಬೇರೆ ಬೇರೆ ಬಣ್ಣಗಳ ಯೋಚನೆಗಳಿಂದ ಎಂದಿಗೂ ಒಮ್ಮುಖವಾದ ಜ್ಞಾನವಾಗಲಿ, ಒಳನೋಟವಾಗಲಿ, ನಂಬಿಕೆ ಶ್ರದ್ಧೆಗಳಾಗಲಿ ಉಂಟಾಗುವುದಿಲ್ಲ. ಆದರೆ ಅವು ತಲೆಯನ್ನು ಬಾಬಿಲೋನಿನ—ಅನೇಕ ಭಾಷೆಗಳ ಅವ್ಯವಸ್ಥೆಯಂತೆ ಗೊಂದಲದಿಂದ ತುಂಬುತ್ತವೆ ಪರರ ಯೋಚನೆ, ಬಿರಿಯುವಂತೆ ತುಂಬಿರುವ ಮನಸ್ಸಿಗೆ ನಿಸ್ಕೃಷ್ಟವಾದ ಒಳಆಲೋಚನೆಗಳೇನೂ ಇರುವುದಿಲ್ಲ. ಅದು ಪೂರ್ಣವಾಗಿ ಅವ್ಯವಸ್ಥಿತವಾಗಿರುತ್ತದೆ ಈ ಸಂಗತಿಯನ್ನು ನಾವು ಅನೇಕ ವಿದ್ವಾಂಸರಲ್ಲಿ ಕಾಣಬಹುದು. ಅವರು ವಿದ್ವಾಂಸರಾಗಿದ್ದರೂ ಅವರಿಗೆ ವಿವೇಕವಾಗಲಿ ಚಾತುರ್ಯವಾಗಲಿ ವ್ಯವಹಾರ ಜ್ಞಾನವಾಗಲಿ ಇರುವುದಿಲ್ಲ ಅವರಿಗಿಂತ ಸ್ವಲ್ಪವೇ ಓದಿ, ಇತರರೊಂದಿಗೆ ವ್ಯವಹಾರದಿಂದಲೂ ಅನುಭವದಿಂದಲೂ ಸ್ವಲ್ಪ ಮಟ್ಟಿನ ಜ್ಞಾನವನ್ನು ಮಾತ್ರ ಸಂಪಾದಿಸಿ ಅದನ್ನು ತಮ್ಮ ಯೋಚನೆಗಳಿಗೆ ಒಳಪಡಿಸಿಕೊಂಡು ಒಂದಾಗಿ ಮಾಡಿಕೊಂಡಿರತಕ್ಕ ಸ್ವಲ್ಪ ವಿದ್ಯಾವಂತರೇ ಮೇಲಾಗಿರುತ್ತಾರೆ.

ಶಾಸ್ತ್ರೀಯವಾಗಿ ಆಲೋಚನೆ ಮಾಡುವ ಮನುಷ್ಯರು ನಡೆದುಕೊಳ್ಳುವುದು ಈ ಅವಿದ್ಯಾವಂತರಂತೆಯೇ. ಆದರ ಇನ್ನೂ ಬಹಳ ದೊಡ್ಡ ಪ್ರಮಾಣದಲ್ಲಿ. ಅವರಿಗೆ ಹೆಚ್ಚು ಜ್ಞಾನದ ಆವಶ್ಯಕತೆಯಿದೆ. ಆದುದರಿಂದ ಅವರು ಹೆಚ್ಚು ಓದಬೇಕಾಗಿದೆ. ಆದರೆ ಅಂತಹ ಶಾಸ್ತ್ರಜ್ಞನ ಮನಸ್ಸು ಬಹಳ ತ್ರಾಣವುಳ್ಳುದಾಗಿದೆ ಆ ಮನಸ್ಸು ಓದಿದುದನ್ನೆಲ್ಲಾ ಸ್ವಾಧೀನಪಡಿಸಿಕೊಂಡು ತನ್ನ ಆಲೋಚನೆಗಳೊಂದಿಗೆ ಒಂದುಮಾಡಿಕೊಳ್ಳುತ್ತವೆ ಅವನ ಒಳನೋಟವು ಮನಸ್ಸನ್ನು ವಿಶಾಲ ಮಾಡಿಕೊಂಡು ಯಾವಾಗಲೂ ಬೆಳೆಯುತ್ತಿರುವುದರಿಂದ ತನ್ನ ವ್ಯಾಸಂಗವನ್ನೆಲ್ಲಾ ಅವನು ತನ್ನ ಜ್ಞಾನದ ಪರಿಪೂರ್ಣತೆಗೇ ಉಪಯೋಗಿಸಿಕೊಂಡು ಅದು ತನ್ನ ಜ್ಞಾನದಲ್ಲಿ ಒಂದಾಗಿ ಸೇರಿಕೊಳ್ಳುವಂತೆ ಮಾಡಿಕೊಳ್ಳುತ್ತಾನೆ ಆ ಸಂವಿಧಾನದಲ್ಲಿ ಅವನ ಸ್ವಂತಯೋಚನೆಯು ವೀಣೆಯ ತಂತಿಯ ಮಂದರ ದನಿಯಂತೆ ಇತರ ದನಿಗಳನ್ನೆಲ್ಲಾ ಮಟ್ಟಮೇಲೇರುತ್ತದೆಯೇ ಹೊರತು ಅವನ ದನಿಯೇ ಅದರಲ್ಲಿ ಲೀನವಾಗುವುದಿಲ್ಲ. ಆದರೆ ಬರಿಯ ಪುಸ್ತಕದ ಜ್ಞಾನವೇ ತುಂಬಿರತಕ್ಕ ಇತರ ಮನಸ್ಸುಗಳಲ್ಲಿ ಗಾನದ ಎಸಳುಗಳು ಎಲ್ಲಾ ಮನೆಗಳಲ್ಲೂ ಅವ್ಯವಸ್ಥೆಯಿಂದ ಸೇರಿಕೊಂಡು ಮುಖ್ಯವಾದ ಯಾವ ದನಿಯೂ ಹೊರಕ್ಕೆ ಕೇಳಿಸದಂತೆ ಆಗುತ್ತದೆ.

ವ್ಯಾಸಂಗದಲ್ಲಿ ತಮ್ಮ ಜೀವನವನ್ನೆಲ್ಲಾ ಕಳೆದು ಅದರಿಂದ ಜ್ಞಾನವನ್ನು ಸಂಗ್ರಹಿಸಿರುವವರು ಪ್ರವಾಸಿಗಳ ಅನುಭವವನ್ನು ಕೇಳಿ ತಿಳಿದು ಯಾವುದಾದರೊಂದು ದೇಶದ

ವಿಚಾರದಲ್ಲಿ ನಿಷ್ಕೃಷ್ಟವಾದ ಜ್ಞಾನವನ್ನು ಸಂಪಾದಿಸಿದವರಂತೆ ಇರುತ್ತಾರೆ. ಅವರು ದೇಶವನ್ನು ಕುರಿತು ಅನೇಕ ವಿಚಾರಗಳನ್ನು ಹೇಳುತ್ತಾರೆ. ಆದರೆ ಅವರಿಗೆ ಆ ದೇಶದ ನಿಜವಾದ ಪರಿಸ್ಥಿತಿಯ ಸ್ಪಷ್ಟವಾದ ಜ್ಞಾನವಿರುವುದಿಲ್ಲ. ಆದರೆ ಆಲೋಚಿಸುವುದರಲ್ಲಿ ತಮ್ಮ ಕಾಲವನ್ನು ಕಳೆದವರನ್ನು ಪ್ರಯಾಣಿಕರಿಗೆ ಹೋಲಿಸಬಹುದು. ತಾವು ಮಾತನಾಡುತ್ತಿರುವ ವಿಷಯದ ನಿಜವಾದ ಸಂಗತಿ ಅವರಿಗೆ ಮಾತ್ರ ಗೊತ್ತು. ಅವರಿಗೆ ವಿಚಾರಗಳ ಅನುಭವ ಚೆನ್ನಾಗಿರುವುದರಿಂದ ಅದರಲ್ಲಿ ಅವರು ನುರಿತವರಾಗಿರುತ್ತಾರೆ.

ವಿಚಾರಗಳನ್ನು ಕಣ್ಣಿನಿಂದ ನೋಡುವವನಿಗೂ ಅದನ್ನೇ ಚರಿತ್ರೆಯಾಗಿ ಬರೆಯುವವನಿಗೂ ಯಾವ ಸಂಬಂಧವಿದೆಯೋ ಅದೇ ಸಂಬಂಧವು ಓದುವವನಿಗೂ ಯೋಚಿಸುವವನಿಗೂ ಇದೆ. ಯೋಚಿಸುವವನು ತನ್ನ ಸ್ವಂತ ಜ್ಞಾನದಿಂದ ಮಾತನಾಡುತ್ತಾನೆ ಆದುದರಿಂದಲೇ ಯೋಚಿಸುವವರೆಲ್ಲಾ ಕೊನೆಯಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಒಂದೇ ತೀರ್ಮಾನಕ್ಕೆ ಬರುತ್ತಾರ ಅವರಲ್ಲಿ ಉಂಟಾಗುವ ವ್ಯತ್ಯಾಸವು ಅವರವರ ಬೇರೆ ಬೇರೆ ದೃಷ್ಟಿಕೋಣದಿಂದ ಉಂಟಾದುದು. ಈ ದೃಷ್ಟಿಕೋಣದಿಂದ ವಿಷಯ ವ್ಯತ್ಯಾಸವಾಗದಿರುವಾಗ ಅವರೆಲ್ಲಾ ಒಂದೇ ಸಮನಾಗಿ ಮಾತನಾಡುತ್ತಾರೆ. ಜಗತ್ತಿನ ನಡೆವಳಿಕೆಗಳ ಮೇಲೆ, ತಮ್ಮ ಬಾಹ್ಯದೃಷ್ಟಿಯ ಪರಿಣಾಮವನ್ನೇ ಅವರು ಹೇಳುವುದು. ನನ್ನ ಪುಸ್ತಕಗಳಲ್ಲಿ ಪರಸ್ಪರ ವಿರುದ್ಧವಾದ ಸ್ವಭಾವದ ವಾಕ್ಯಗಳಿದ್ದುದರಿಂದ ಅವುಗಳನ್ನು ನಾನು ಕುಂಬ ಹಿಂದೆಗೆದು ಜನಗಳ ಮುಂದೆ ಇಟ್ಟಿದ್ದೇನೆ. ಆದರೆ ಅನಂತರ, ಅದೇ ಅಭಿಪ್ರಾಯವನ್ನು ನನಗಿಂತ ಹಿಂದೆ ಬದುಕಿದ್ದ ಮಹನೀಯರು ತಮ್ಮ ಗ್ರಂಥಗಳಲ್ಲಿ ಹೇಳಿರುವುದನ್ನು ನೋಡಿ ನನಗೆ ಆನಂದಕರವಾದ ಆಶ್ಚರ್ಯವುಂಟಾಗಿದೆ.

ಪುಸ್ತಕ ವೇದಾಂತಿಯು ಮತ್ತೊಬ್ಬ ಹೇಳಿದುದನ್ನೋ ಅಥವ ಇನ್ನೊಬ್ಬನ ಅಭಿಪ್ರಾಯವನ್ನೋ ಸುಮ್ಮನೆ ವರದಿಮಾಡುತ್ತಾನೆ; ಮೂರನೆಯವನು ಎತ್ತಿದ ಆಕ್ಷೇಪಣೆಗಳನ್ನು ಇತಿಹಾಸ ವಿಮರ್ಶಕರಂತೆ ಬೇರೆ ಬೇರೆ ಅಭಿಪ್ರಾಯಗಳೊಂದಿಗೆ ತುಲನೆಮಾಡಿ ಯೋಚಿಸಿ ವಿಮರ್ಶಿಸಿ ಸತ್ಯದ ಹತ್ತಿರಕ್ಕೆ ಹೋಗಲು ಪ್ರಯತ್ನಿಸುತ್ತಾನೆ. ಉದಾಹರಣೆಗೆ ಅವನು ಲೈಬೆನಿಟ್ಸ್ (Leibnitz) ಎಂಬುವನು ಕೆಲವು ಕಾಲದವರೆಗೆ ಸ್ಪಿನೋಜ (Spinoza) ಎಂಬುವನ ಅನುಯಾಯಿಯಾಗಿರಲಿಲ್ಲವೇ ಮುಂತಾದ ವಿಷಯಗಳನ್ನು ತಿಳಿಯಲು ಹೊರಡುತ್ತಾನೆ. ಈ ವಿಚಾರದಲ್ಲಿ ಕುತೂಹಲವುಳ್ಳವರಿಗೆ ನನ್ನ ಅಭಿಪ್ರಾಯದ ಸ್ಪಷ್ಟವಾದ ಉದಾಹರಣೆಗಳು ಹರ್ಬರ್ಟ್ಸ್ ಅನಲಿಟಿಕಲ್ ಎಲುಸಿಡೇಶನ್ ಆಫ್ ಮೊರಾಲಿಟಿ ಅಂಡ್ ನ್ಯಾಚುರಲ್ ರೈಟ್ ಮತ್ತು ಅದೇ ಗ್ರಂಥಕರ್ತರಿಂದ ರಚಿತವಾದ ಸ್ವಾತಂತ್ರ್ಯ ಲೇಖನಗಳು (Letters on Freedom) ಎಂಬುವುಗಳಲ್ಲಿ ದೊರೆಯುತ್ತವೆ. ಅಂತಹ ಮನುಷ್ಯನು ಅಷ್ಟು ತೊಂದರೆಯನ್ನು ತೆಗೆದುಕೊಳ್ಳುತ್ತಾನಲ್ಲಾ ಎಂದು ಆಶ್ಚರ್ಯವಾಗಬಹುದು. ಸ್ವಲ್ಪವೇ ಸ್ವಲ್ಪ ಯೋಚಿಸಿದರೆ ಅವನ ಉದ್ದೇಶವು

ಸಾಧಿಸುತ್ತದೆ. ಆದರೆ ಒಂದು ಸಣ್ಣ ಕಷ್ಟವಿದೆ. ಯೋಚಿಸುವುದು ಅವನ ಇಚ್ಛಾ ಶಕ್ತಿಗೆ ಒಳಪಡುವುದಲ್ಲ. ಮನುಷ್ಯನು ಯಾವಾಗಲೂ ಕುಳಿತುಕೊಂಡು ಓದಬಹುದು. ಆದರೆ ಯೋಚಿಸಲಾರ. ಮನುಷ್ಯರ ಸಮಾಚಾರ ಹೇಗೋ ಯೋಚನೆಗಳೂ ಹಾಗೆಯೇ. ಇಷ್ಟಬಂದಾಗ ಅವರನ್ನು ಕರೆಸಲು ಸಾಧ್ಯವಿಲ್ಲ. ಅವರು ಬರುವವರೆಗೆ ನಾವು ಕಾಯ ಬೇಕು. ಮನೋಭಾವ, ಎಚ್ಚರಿಕೆ, ಹೊರಗಿನ ಸ್ಫೂರ್ತಿ ಇವುಗಳ ಸುಖಕರವಾದ ಒಂದುಗೂಡುವಿಕೆಯಿಂದ ಯಾವ ವಿಷಯದ ಮೇಲೆಯಾದರೂ ಏಕಾಗ್ರತೆ ಹುಟ್ಟ ಬೇಕು. ಅದೇ ಏನು ಮಾಡಿದರೂ ಜನರಿಗೆ ಬರುವಂತೆ ತೋರುವುದಿಲ್ಲ.

ನಮ್ಮ ವೈಯಕ್ತಿಕ ಯೋಗಕ್ಷೇಮಕ್ಕೆ ಸಂಬಂಧಪಟ್ಟ ವಿಚಾರಗಳಲ್ಲಿ ಏನು ನಡೆ ಯುತ್ತದೆಂಬುದರಿಂದ ಇದರ ಸತ್ಯವನ್ನು ನಿದರ್ಶನಕ್ಕೆ ತರಬಹುದು ವೈಯಕ್ತಿಕ ವ್ಯವಹಾರದಲ್ಲಿ ಒಂದು ತೀರ್ಮಾನಕ್ಕೆ ಬರುವುದು ಆವಶ್ಯಕವಾದಾಗ, ನಾವು ಒಂದು ಕಡೆ ಕುಳಿತುಕೊಂಡು ವಿಷಯದ ಯೋಗ್ಯತೆಯನ್ನು ಯೋಚಿಸಿ ನಿಶ್ಚಯಿಸುವುದಕ್ಕೆ ಆಗುವು ದಿಲ್ಲ. ಯಾಕೆಂದರೆ ಹಾಗೆ ಮಾಡಲು ನಾವು ಪ್ರಯತ್ನಿಸಿದರೆ ಆ ವಿಷಯದಲ್ಲಿ ಮನ ಸ್ಸನ್ನು ನಿಲ್ಲಿಸುವುದು ಸಾಧ್ಯವಲ್ಲವೆಂದು ನಮಗೇ ಗೊತ್ತಾಗುತ್ತದೆ. ಮನಸ್ಸು ಇತರ ವಸ್ತುಗಳ ಕಡೆ ಅಲೆಯುತ್ತದೆ. ಯೋಚನೆಗೆ ಒಳಗಾಗಿರುವ ವಿಷಯ ಮನಸ್ಸಿಗೆ ಬೇಡ ವಾಗಿರುವುದು, ಇದಕ್ಕೆ ಒಂದು ಕಾರಣವಾಗಿರುತ್ತದೆ. ಆ ಸಂದರ್ಭಗಳಲ್ಲಿ ನಾವು ಮನಸ್ಸನ್ನು ಬಲಾತ್ಕರಿಸಬಾರದು. ಮನಸ್ಸು ಸರಿಯಾದ ಸ್ಥಿತಿಗೆ ಬರುವವರೆಗೆ ನಿರೀ ಕ್ಷಿಸಬೇಕು. ಅನೇಕ ವೇಳೆ ಅನಿರೀಕ್ಷಿತವಾಗಿ ಸರಿಯಾದ ಹದಕ್ಕೆ ಬರುತ್ತದೆ. ಪದೇ ಪದೇ ಹಿಂದಿರುಗುತ್ತದೆ. ನಾವು ಅದನ್ನು ಯಾವ ಯಾವ ಮನೋಭಾವದಿಂದ ಎದುರು ಗೊಳ್ಳುತ್ತೇವೆಯೋ, ಆ ಮನೋಭಾವಕ್ಕೆ ಅನುಸಾರವಾಗಿ ಅದು ಹೊಸರೂಪವನ್ನು ಹೊಂದುತ್ತದೆ. ಮನಸ್ಸಿನ ಈ ಕಾರ್ಯಕ್ರಮವೇ ಪರಿಪಕ್ವವಾದ ತೀರ್ಮಾನವೆನ್ನಿಸಿಕೊಳ್ಳು ವುದು ಯಾಕೆಂದರೆ ಪರಿಪಕ್ವವಾದ ತೀರ್ಮಾನಕ್ಕೆ ಬರುವ ಕಾರ್ಯವು ವಿಭಾಗಿಸಲ್ಪಡ ಬೇಕು. ಆ ಕ್ರಮದಲ್ಲಿ ಒಂದು ಸಲ ನಮ್ಮ ಲಕ್ಷ್ಯಕ್ಕೆ ಬಾರದುದು ಮತ್ತೊಂದು ಸಲ ಬರುತ್ತದೆ ಹತ್ತಿರದಲ್ಲಿ ಆಳವಾಗಿ ವಿಚಾರ ಮಾಡುವುದರಿಂದ ವಿಷಯಗಳು ಮೊದಲು ತೋರಿದಷ್ಟು ಕೆಟ್ಟಿಲ್ಲವೆಂದು ಗೊತ್ತಾಗುವುದರಿಂದ ನಿರುತ್ಸಾಹವು ಮಾಯವಾಗುತ್ತದೆ.

ಈ ನಿಯಮವು ಕಾರ್ಯಕಾರಿಯಾದ ನಿತ್ಯವ್ಯವಹಾರಗಳಿಗೆ ಅನ್ವಯಿಸುವಂತೆ ಬುದ್ಧಿಯ ಜೀವನಕ್ಕೂ ಅನ್ವಯಿಸುತ್ತದೆ. ಸರಿಯಾದ ಕಾಲ ಬರುವುದನ್ನು ಮನು ಷ್ಯನು ಕಾಯಬೇಕು. ಅತಿ ತೀಕ್ಷ್ಣವಾದ ಮನಸ್ಸೂ ಕೂಡ ಎಲ್ಲಾ ಕಾಲದಲ್ಲೂ ಯೋಚಿಸುವ ಶಕ್ತಿಯುಳ್ಳದುದಾಗಿರುವುದಿಲ್ಲ. ಅದುದರಿಂದ ನಾವು ಮೊದಲೇ ಹೇಳಿ ದಂತೆ ಸತ್ವಶಾಲಿಗಳು ವಿರಾಮಕಾಲದಲ್ಲಿ ಓದುವುದು ಒಳ್ಳೆಯದು. ಓದುವುದು ಸ್ವಂತ ಆಲೋಚನೆಗೆ ಪ್ರತಿ. ಮತ್ತೊಬ್ಬನನ್ನು ಯೋಚಿಸುವುದಕ್ಕೆ ಬಿಡುವುದರಿಂದ, ನಮಗೆ

ಅನುಸಾರವಾದ ಮಾರ್ಗದಲ್ಲಿ ಅಲ್ಲದಿದ್ದರೂ, ನಮ್ಮ ಮನಸ್ಸಿಗೆ ಸತ್ವಶಕ್ತಿಯು ಬರುತ್ತದೆ. ಆದುದರಿಂದ ಒಬ್ಬ ಮನುಷನು ಅತಿಯಾಗಿ ಓದಬಾರದು. ಹಾಗೆ ಮಾಡಿದರೆ ಅವನ ಮನಸ್ಸು ಓದುವುದಕ್ಕೆ-ನೆಳಲನ್ನು-ಹೊಂದಿಕೊಂಡು ನಿಜವಾದುದನ್ನು ಮರೆತು ಬಿಡಬಹುದು. ಮನಸ್ಸು ನಡೆದು ನಡೆದು ಸವೆದ ದಾರಿಯಲ್ಲೇ ಹೋಗುವ ಅಭ್ಯಾಸಮಾಡಿಕೊಳ್ಳಬಹುದು. ಅಥವ ಇತರರ ಆಲೋಚನೆಗಳ ದಾರಿಯನ್ನು ಅನುಸರಿಸಿ ತನಗೇ ತಾನು ಹೊಸಬನಾಗಬಹುದು. ಕೊನೆಯದಾಗಿ ಮನುಷ್ಯನು ಓದುವುದಕ್ಕಾಗಿ, ಜೀವಿತ ಪ್ರಪಂಚದಿಂದ ಕಣ್ಣನ್ನು ಬೇರೆ ಕಡೆಗೆ ತಿರುಗಿಸಬಾರದು. ಯಾಕೆಂದರೆ ಮನುಷ್ಯನನ್ನು ಆಲೋಚನೆಗೆ ಪ್ರೇರಿಸುವ ಸ್ಫೂರ್ತಿಯೂ ಮನೋಭಾವವೂ ಪುಸ್ತಕದಿಂದ ಬರುವುದಕ್ಕಿಂತ ಹೆಚ್ಚಾಗಿ ಜೀವಿತಪ್ರಪಂಚದಿಂದ ಬರುತ್ತದೆ. ಮನುಷ್ಯನು ತನ್ನ ಎದುರಿಗೆ ನೋಡುವ ಜೀವನವೇ ಅವನ ಆಲೋಚನೆಗಳ ಸ್ವಾಭಾವಿಕ ವಸ್ತು. ಸೃಷ್ಟಿಯ ಮುಖ್ಯ ಭಾಗವಾದ ಆ ಜೀವಶಕ್ತಿಯು ಮತ್ತಾವುದೂ ಮಾಡದಂತೆ ಅವನ ಆಲೋಚನಾಶಕ್ತಿಯನ್ನು ಚುರುಕುಗೊಳಿಸಬಲ್ಲುದು

ಇಷ್ಟನ್ನೆಲ್ಲಾ ಹೇಳಿದ ಮೇಲೆ, ಪುಸ್ತಕ ವೇದಾಂತಿಯನ್ನು, ನಿಜವಾಗಿ ಯೋಚಿಸುವ ಮನುಷ್ಯನಿಂದ ಸುಲಭವಾಗಿ ಬೇರೆಯಾಗಿ ತಿಳಿಯಬಹುದು ನಿಜವಾಗಿ ಆಲೋಚಿಸುವವನ ಮನೋಭಾವಗಳು, ಅವನಲ್ಲಿ ವ್ಯಕ್ತವಾಗುವ ಶ್ರದ್ಧೆ, ಕಲ್ಪನಾಶಕ್ತಿ, ಅವನ ಎಲ್ಲಾ ಆಲೋಚನೆಗಳ ಸ್ಪಷ್ಟತೆ, ದೃಢವಾದ ನಂಬಿಕೆ ಇವುಗಳಿಂದ ವ್ಯಕ್ತವಾಗುವುದು ಕಾಣುತ್ತದೆ. ಆದರೆ ಪುಸ್ತಕ ವೇದಾಂತಿಯ ಬಳಿ ಇರುವುದೆಲ್ಲಾ—ಎಲ್ಲಾ ಕಡೆಯಿಂದಲೂ ಸಂಗ್ರಹಿಸಿದ ಹಳೆಯ ಮರದ ಸಾಮಾನು ಎಂಬುದು ಎಲ್ಲರಿಗೂ ಗೊತ್ತಾಗುತ್ತದೆ ಪುಸಕ ವೇದಾಂತಿಯ ಬುದ್ಧಿಯು ಅಸ್ಪಷ್ಟವೂ ಮಂದವೂ ಆದುದು. ಅದು ನಕಲಿನ ನಕಲು. ಅವನ ಶೈಲಿಯು ಪ್ರಚಾರದಲ್ಲಿರುವ ಅಶುದ್ಧವಾದ ಪದಸಮೂಹಗಳುಳ್ಳದುದಾಗಿರುತ್ತದೆ. ಈ ಭಾಗದಲ್ಲಿ ಅವನು, ತನ್ನ ಸ್ವಂತ ನಾಣ್ಯಗಳಿಲ್ಲದೆ ಪರದೇಶದ ನಾಣ್ಯಗಳನ್ನು ತನ್ನ ದೇಶದಲ್ಲಿ ಚಲಾವಣೆ ಮಾಡುವ ಸಣ್ಣ ರಾಜ್ಯದ ರಾಜನಂತೆ ಇರುತ್ತಾನೆ.

ಬರಿಯ ವ್ಯಾಸಂಗವು ಹೇಗೆ ಆಲೋಚನೆಗೆ ಪ್ರತಿಯಲ್ಲವೋ ಹಾಗೆಯೇ ಬರಿಯ ಅನುಭವವೂ ಆಲೋಚನೆಗೆ ಪ್ರತಿಯಾಗಲಾರದು. ಆಹಾರವು ಜೀರ್ಣವಾಗಿ ದೇಹದೊಳಕ್ಕೆ ಸೇರುವುದಕ್ಕೂ ತಿನ್ನುವುದಕ್ಕೂ ಯಾವ ಸಂಬಂಧವಿದೆಯೋ ಅನುಭವಕ್ಕೂ ಯೋಚನೆಗೂ ಅದೇ ಸಂಬಂಧವಿದೆ. ಮನುಷ್ಯಪ್ರಪಂಚದ ಅಭಿವೃದ್ಧಿಗೆಲ್ಲಾ ತನ್ನ ಶೋಧನೆಗಳೇ ಕಾರಣವೆಂದು ಅನುಭವವು ಹೆಮ್ಮೆಪಡುವುದು, ದೇಹವನ್ನು ಸರಿಯಾದ ರೀತಿಯಲ್ಲಿ ಇಡಲು ತಾನೇ ಮುಖ್ಯ ಕಾರಣವೆಂದು ಬಾಯಿ ಹೇಳಿದಂತೆ ಆಗುತ್ತದೆ.

ನಿಜವಾಗಿಯೂ ಸತ್ವವುಳ್ಳ ಮನಸ್ಸಿನ ಕಾರ್ಯಗಳೆಲ್ಲಾ ತೀರ್ಮಾನ ಮತ್ತು ಸ್ಪಷ್ಟತೆಯ ಲಕ್ಷಣಗಳಿಂದ ಕೂಡಿರುತ್ತವೆ. ಅಂದರೆ ಅವುಗಳಲ್ಲಿ ಅಸ್ಪಷ್ಟವಾದುದೂ ಮಬ್ಬು

ಮಬ್ಬು ಆಮದೂ ಯಾವುದೂ ಇರುವುದಿಲ್ಲ. ನಿಜವಾಗಿ ಸತ್ವಶಾಲಿಯಾದ ಮನಸ್ಸಿಗೆ ಅದು ಹೇಳಬೇಕಾದುದೇನೆಂಬುದು-ಅದು ಪದ್ಯ ಗದ್ಯ ಸಂಗೀತ ಅಥವ ಗಾನದ ದ್ವಾರ ಹೇಳಲಿ-ಚೆನ್ನಾಗಿ ಗೊತ್ತು. ಉಳಿದ ಇತರ ಮನಸ್ಸುಗಳು ಅಷ್ಟು ಸ್ಪಷ್ಟವಾಗಿಯೂ ಖಚಿತವಾಗಿಯೂ ಖಂಡಿತವಾಗಿಯೂ ಇರುವುದಿಲ್ಲ. ಇದರಿಂದಲೇ ಯೋಚಿಸುವ ಮನಸ್ಸು ಯಾವುದೆಂಬುದನ್ನೂ ಯೋಚಿಸದಿರುವ ಮನಸ್ಸು ಯಾವುದೆಂಬುದನ್ನೂ ತಿಳಿಯಬಹುದು.

ನಿಜವಾಗಿ, ತಾನೇ ಆಲೋಚನೆ ಮಾಡುವವನು ಅಷ್ಟರ ಮಟ್ಟಿಗೆ ತಾನೇ ರಾಜನಂತೆ ಅವನು ಇತರರ ಅಧಿಕಾರಕ್ಕೆ ಒಳಪಟ್ಟವನಲ್ಲ. ಅವನ ಅಭಿಪ್ರಾಯಗಳೂ ತೀರ್ಮಾನಗಳೂ ರಾಜರ ಅಪ್ಪಣೆಯಂತೆ ತನ್ನ ಸ್ವಂತ ರಾಜಕೀಯ ಅಧಿಕಾರದಿಂದ ನೇರವಾಗಿ ಹೊರಡುತ್ತವೆ ಚಕ್ರವರ್ತಿಯು ಇತರರ ಅಪ್ಪಣೆಯನ್ನು ಹೇಗೆ ಸಹಿಸುವುದಿಲ್ಲವೋ ಅವನೂ ಹಾಗೆಯೇ ತಾನು ಯಾವುದನ್ನು ಅಪ್ಪಣೆ ಮಾಡಿರುವನೋ ಅದರ ಹೊರತು ಉಳಿದುದನ್ನು ಒಪ್ಪುವುದಿಲ್ಲ. ಸದ್ಯದ ಅಭಿಪ್ರಾಯಗಳು, ಆಧಾರಗಳು, ಪಕ್ಷಪಾತಗಳು ಇವುಗಳ ಜತೆಯಲ್ಲಿ ತೊಳಲಾಡುವ ಜನರು ಪ್ರಜೆಗಳಂತೆ. ಅವರು ಸದ್ದಿಲ್ಲದೆ ಮೇಲಿನಿಂದ ಬಂದ ಅಪ್ಪಣೆಯನ್ನು ಸ್ವೀಕರಿಸಿ ಪಾಲಿಸುತ್ತಾರೆ.

ವಾದಗ್ರಸ್ತವಾದ ವಿಷಯಗಳನ್ನು ಇತರರ ಅಭಿಪ್ರಾಯದ ಆಧಾರದಿಂದ ತೀರ್ಮಾನಿಸಲು ಉತ್ಸುಕರಾಗಿರುವವರು ಇತರರ ಅಭಿಪ್ರಾಯಗಳಂತೆ ನಡೆಯಲು ಸಂತೋಷವುಳ್ಳವರಾಗಿಯೇ ಇರುತ್ತಾರೆ. ಯಾಕೆಂದರೆ ಅವರಿಗೆ ಸ್ವಂತವಾದ ಅಭಿಪ್ರಾಯಗಳೇ ಇರುವುದಿಲ್ಲ. ಅಂಥವರ ಸಂಖ್ಯೆಯೇ ಜಗತ್ತಿನಲ್ಲಿ ಹೆಚ್ಚು. ಸಿನೆಕ ಎಂಬುವನು ಹೇಳುವಂತೆ ವಿಚಾರ ಮಾಡಿ ತೀರ್ಮಾನಕ್ಕೆ ಬರುವವರಿಗಿಂತ ಸುಮ್ಮನೆ ನಂಬುವ ಮಾರ್ಗವನ್ನು ಅನುಸರಿಸುವವರೇ ಜಗತ್ತಿನಲ್ಲಿ ಹೆಚ್ಚು ಅವರು ತಮ್ಮ ಸಂಭಾಷಣೆಯಲ್ಲಿ, ಇತರರ ಅಭಿಪ್ರಾಯಗಳನ್ನು ತಾರತಮ್ಯವಿಲ್ಲದೆ ಬಳಸಿ, ಒಬ್ಬರೊಂದಿಗೆ ಒಬ್ಬರು ಹೊಡೆದಾಡುತ್ತಾರೆ. ಅವರ ಮನಸ್ಸು ಯೋಚಿಸುವುದಕ್ಕೂ, ತೀರ್ಮಾನ ಮಾಡುವುದಕ್ಕೂ ಅಶಕ್ತವಾಗಿರುತ್ತದೆ. ಅಂಥವರೊಂದಿಗೆ ಯಾರಿಗಾದರೂ ವಾದವು ಸಂಭವಿಸಿದರೆ ಅವನು ಸುಮ್ಮನಾಗುವುದು ಲೇಸು. ಅವರಿವರ ಅಭಿಪ್ರಾಯಗಳನ್ನು ಮುಂದೊಡ್ಡಿ ಅವರು ವಾದಮಾಡುವವನ ಬಾಯನ್ನು ಮುಚ್ಚಿಸುವರು. ಕೊನೆಗೆ ತಾವೇ ಗೆದ್ದೆವೆಂದೂ ಹೇಳಿಕೊಳ್ಳುವರು.

ವ್ಯವಹಾರಪ್ರಪಂಚದಲ್ಲಿ—ಅದು ಎಷ್ಟೇ ಅನನುಕೂಲವಾದುದೂ, ಅನ್ಯಾಯವಾದುದೂ ಅಹಿತವಾದುದೂ ಆದರೂ—ನಾವು ಗುರುತ್ವಾಕರ್ಷಣ ಶಕ್ತಿಗೆ ಒಳಗಾಗಿ ಪದೇ ಪದೇ ಅದನ್ನು ಜಯಿಸಲು ಪ್ರಯತ್ನಿಸುತ್ತಾ ಜೀವಿಸುತ್ತಿರುತ್ತೇವೆ. ಆದರೆ ಬುದ್ಧಿಯ ಪ್ರಪಂಚದಲ್ಲಿ ನಾವು ದೇಹವಿಲ್ಲದ ಆತ್ಮಗಳು. ಅಲ್ಲಿ ನಮಗೆ ಅಂತಹ ಬಂಧನಗಳಾಗಲಿ, ದಾರಿದ್ರ್ಯ ದುಃಖಗಳಾಗಲಿ ಇಲ್ಲ. ಆದುದರಿಂದಲೇ ಫಲವತ್ತಾದ ಮನಸ್ಸಿಗೆ ಸಕಾಲದಲ್ಲಿ ತನ್ನಿಂದ ದೊರಕುವ ಆನಂದಕ್ಕೆ ಸಮಾನವಾದುದು ಮತ್ತಾವುದೂ ಇಲ್ಲ.

ಯೋಚಿಸಿದರೆ ದೊರಕುವ ಅನೇಕ ಬೆಲೆಯಾದ ಆಲೋಚನೆಗಳಿವೆ. ಆದರೆ ಅವುಗಳ ಪೈಕಿ ಕೆಲವಕ್ಕೆ ಮಾತ್ರ, ಕಾಗದದ ಮೇಲೆ ಬರೆದನಂತರ ಓದುಗರ ಸಹಾನುಭೂತಿಯನ್ನು ದೊರಕಿಸುವ ಮತ್ತು ವಾಚಕರನ್ನು ಆಲೋಚನೆಗೆ ಪ್ರೇರಿಸುವ ಯೋಗ್ಯತೆ ಇದೆ. ಒಬ್ಬ ಮನುಷ್ಯನು ಮೊದಲು ತನಗಾಗಿ ಏನನ್ನು ಯೋಚಿಸಿದ್ದಾನೋ ಅದಕ್ಕೆ ನಿಜವಾದ ಬೆಲೆ ಇದೆ ಎಂಬುದನ್ನು ಮರೆಯಬಾರದು ಆಲೋಚನೆ ಮಾಡುವವರನ್ನು ತನಗಾಗಿ ಆಲೋಚಿಸುವವನು ಇತರರಿಗಾಗಿ ಆಲೋಚಿಸುವವನು ಎಂಬುದಾಗಿ ಎರಡು ಬಗೆಯಾಗಿ ವಿಭಾಗಿಸಬಹುದು. ಮೊದಲನೆಯವರು ಸ್ವಾಭಾವಿಕವಾದ ಸ್ವತಂತ್ರವಾದ ಆಲೋಚನೆಗಾರರು. ಅವರು ನಿಶ್ಚಯವಾಗಿಯೂ ಯೋಚಿಸುತ್ತಾರೆ. ಮತ್ತು ನಿಶ್ಚಯವಾಗಿಯೂ ಸ್ವತಂತ್ರರಾಗಿರುತ್ತಾರೆ. ಅವರೇ ನಿಜವಾದ ಜ್ಞಾನಿಗಳು. ಅವರು ಶ್ರದ್ಧಾವಂತರು ಅವರ ಜೀವನದ ಆನಂದಗಳೂ ಸುಖಗಳೂ ಯೋಚಿಸುವುದರಲ್ಲಿ ಅಡಕವಾಗಿರುತ್ತವೆ ಉಳಿದವರು ಕುತರ್ಕಿಗಳು ತಾವು ಯಾವುದಲ್ಲವೋ ಅದು ತಾವಾಗಿ ತೋರಲು ಅವರು ಇಷ್ಟಪಡುತ್ತಾರೆ. ಮತ್ತು ತಮಗೆ ಪ್ರಪಂಚದಿಂದ ಏನು ಸುಖ ದೊರೆಯಬಹುದೋ ಅದನ್ನು ಹುಡುಕುತ್ತಾರೆ ಉಳಿದ ಯಾವ ವಿಚಾರಗಳಲ್ಲೂ ಅವರಿಗೆ ಶ್ರದ್ಧೆಯಿಲ್ಲ. ಈ ಎರಡು ತರಗತಿಗಳ ಪೈಕಿ ಮನುಷ್ಯನು ಯಾವ ತರಗತಿಗೆ ಸೇರಿರುವನೆಂಬುದನ್ನು ಅವನ ಶೈಲಿ, ರೀತಿ ಇವುಗಳಿಂದ ತಿಳಿಯಬಹುದು. (Lichtenberg) ಲಿಚ್‌ಟೆನ್‌ಬರ್ಗ್ ಮೊದಲನೆಯ ತರಗತಿಯವನು. (Herder) ಹರ್‌ಡರ್ ನಿಸ್ಸಂದೇಹವಾಗಿ ಎರಡನೆ ತರಗತಿಗೆ ಸೇರಿದವನು

ಜೀವನದ ಸಮಸ್ಯೆಯು ವಿಶಾಲವಾದುದು ಮತ್ತು ನಮ್ಮೊಂದಿಗೆ ಅತಿ ನಿಕಟವಾದ ಸಂಬಂಧವುಳ್ಳದುದು. ಆದಕ್ಕೆ ಹೋಲಿಸಿ ನೋಡಿದರೆ ನಮ್ಮ ನಿತ್ಯವ್ಯವಹಾರದ ಈ ಬದುಕು ಅಸ್ಪಷ್ಟವೂ ಕ್ಷಣಿಕವೂ ಹಿಂಸಾಯುಕ್ತವೂ ಸ್ವಪ್ನಸಮಾನವೂ ಆದುದು. ಜಗತ್ತು ಈ ನಿತ್ಯವ್ಯವಹಾರದ ಕ್ಷಣಿಕಜೀವನದಲ್ಲಿ ತೊಡಗಿರುವುದೇ ಹೊರತು, ಜೀವನದ ವಿಶಾಲ ಸಮಸ್ಯೆಗಳನ್ನು ಕುರಿತು ಸ್ಪಷ್ಟವಾದ ಅಭಿಪ್ರಾಯಗಳನ್ನು ಹೊಂದಿಲ್ಲ. ಎಲ್ಲೋ ಒಬ್ಬರು ಇಬ್ಬರಿಗೆ ಹೊರತು ಇಂತಹ ಸಮಸ್ಯೆಗಳು ಇವೆ ಎಂಬುದು ಕೂಡ ಇತರರಿಗೆ ತಿಳಿಯದು. ಅವರು ತಮ್ಮ ದಿನದಿನದ—ತಮ್ಮ ಪೂರ್ಣವಾದ ಜೀವಮಾನದವರೆಗಿನ ಕಾಲವನ್ನು ಸಹ ಅಲ್ಪ—ಅಲ್ಪ ವಿಚಾರಗಳನ್ನು ಮಾತ್ರ ಲಕ್ಷ್ಯಕ್ಕೆ ತಂದುಕೊಂಡು ಜೀವನದ ವಿಶಾಲ ಪ್ರಶ್ನೆಗಳನ್ನು ಪೂರ್ಣವಾಗಿ ಔದಾಸೀನ್ಯದಿಂದ ನೋಡುತ್ತಲೋ ಅಥವಾ ಪ್ರಚಾರದಲ್ಲಿರುವ ಯಾವುದಾದರೂ ತತ್ವಜ್ಞಾನವನ್ನು ಅವಲಂಬಿಸಿ ಅದರಿಂದ ಮನಸ್ಸಿಗೆ ಸಮಾಧಾನವನ್ನು ತಂದುಕೊಂಡು ಜೀವಿಸುತ್ತಲೋ ಇರುವರು. ಇದನ್ನೆಲ್ಲಾ ನೋಡಿದರೆ "ಮನುಷ್ಯನು ಯೋಚನೆ ಮಾಡುವ ಪ್ರಾಣಿ" ಎಂಬುದು ಎಲ್ಲೋ ಬಹು ಅಪರೂಪವಾದುದೆಂದು ಅಭಿಪ್ರಾಯವಾಗುವುದು. ನಿಜವಾಗಿ ನೋಡುವವನಿಗೆ ಮನುಷ್ಯನ ಅವಿವೇಕ ಮತ್ತು ಕೆಟ್ಟ ಸ್ವಭಾವದಿಂದ ಏನೂ ಆಶ್ಚರ್ಯವುಂಟಾಗು

ವುದೇ ಇಲ್ಲ. ಆದರೆ ಬದಲು ಭೂತ ಭವಿಷ್ಯತ್ತಿನ ಆಲೋಚನೆಯು ಸ್ವಲ್ಪವೂ ಇಲ್ಲದೆ ಸದ್ಯದ ವಿಷಯದಲ್ಲಿಯೇ ಲೀನವಾಗಿರುವ ಪ್ರಾಣಿಗಳಿಗಿಂತ ಮನುಷ್ಯ ಬುದ್ಧಿಯ ವ್ಯಾಪ್ತಿಯು ಎಲ್ಲೋ ಸ್ವಲ್ಪ ಮಾತ್ರ ಮುಂದಕ್ಕೆ ಹೋಗಿದೆಯೇ ಹೊರತು ಸಾಧಾರಣವಾಗಿ ಊಹಿಸಲ್ಪಟ್ಟಿರುವಂತೆ ಅತ್ಯಂತ ಹೆಚ್ಚಾಗಿ ಮುಂದಕ್ಕೆ ಹೋಗಿಲ್ಲವೆಂದು ಗೊತ್ತಾಗುವುದು.

—ಶೋಪನ್ ಹವುರ್.

ಅನುವಾದಕ: ಗೊರೂರು ರಾಮಸ್ವಾಮಿ ಐಯಂಗಾರ್.

# ಗ್ರಂಥಗಳು ಮತ್ತು ಅವುಗಳ ವ್ಯಾಸಂಗ.

ಅಜ್ಞಾನವು ಐಶ್ವರ್ಯದ ಜತೆಯಲ್ಲಿದ್ದಾಗ ಮಾತ್ರ ತಿರಸ್ಕರಣೀಯವಾದುದು. ಬಡವನನ್ನು ದಾರಿದ್ರ್ಯವೂ, ಜೀವನದ ಆವಶ್ಯಕತೆಗಳೂ ಹಿಡಿದು ಬಾಧಿಸುತ್ತವೆ. ದುಡಿಮೆಯು ಅವನ ಮನಸ್ಸಿನಲ್ಲಿ ತುಂಬಿಕೊಂಡು ಜ್ಞಾನದ ಸ್ಥಳವನ್ನು ಆಕ್ರಮಿಸುತ್ತದೆ. ಆದರೆ ಅಜ್ಞಾನಿಗಳಾದ ಧನಿಕರು ಇಂದ್ರಿಯತೃಪ್ತಿಗಾಗಿಯೇ ಜೀವಿಸುತ್ತಾರೆ. ನಿತ್ಯ ಹೊಲಗದ್ದೆಗಳಲ್ಲಿ ಕಣ್ಣಿಗೆ ಬೀಳುವ ಪಶುಗಳಿಗೆ ಅವರು ಸಮಾನರು. ಐಶ್ವರ್ಯವನ್ನೂ, ವಿರಾಮವನ್ನೂ, ಅವುಗಳಿಂದ ಹೊಂದಬಹುದಾದ ಅತ್ಯುತ್ಕೃಷ್ಟವಾದ ಪ್ರಯೋಜನಕ್ಕೆ ವಿನಿಯೋಗಿಸಲಿಲ್ಲವೆಂದು ಅವರನ್ನು ಆಕ್ಷೇಪಿಸಬಹುದು

ನಾವು ಓದುವಾಗ ಮತ್ತೊಬ್ಬ ಮನುಷ್ಯನು ನಮಗಾಗಿ ಯೋಚಿಸುತ್ತಾನೆ. ಅವನ ಮನಸ್ಸಿನಲ್ಲಿ ನಡೆದ ವಿಷಯವನ್ನೇ ನಾವು ಮತ್ತೆ ಪುನರಾವರ್ತಿ ಮಾಡುತ್ತೇವೆ. ಬರವಣಿಗೆಯನ್ನು ಕಲಿಯಲು ವಿದ್ಯಾರ್ಥಿಯು, ಉಪಾಧ್ಯಾಯನು ಸೀಸದ ಕಡ್ಡಿಯಲ್ಲಿ ಬರೆದಿರುವುದರ ಮೇಲೆ ತಿದ್ದುತ್ತಾನೆ ಓದುವುದರಲ್ಲೂ ಹಾಗೆಯೆ. ಆಲೋಚನೆಯ ಬಹುಭಾಗವನ್ನು ನಮಗಾಗಿ ಇತರರು ಆಗಲೇ ಮಾಡಿರುತ್ತಾರೆ. ಆದುದರಿಂದಲೇ ನಾವು ಬಹುಕಾಲ ಯೋಚನೆ ಮಾಡುತ್ತಿದ್ದ ನಂತರ ಒಂದು ಪುಸ್ತಕವನ್ನು ತೆಗೆದುಕೊಂಡು ಓದಿದರೆ ನಮಗೆ ಬಿಡುವುಂಟಾಗುತ್ತದೆ. ನಾವು ಓದುತ್ತಿರುವಾಗ ನಮ್ಮ ಮನಸ್ಸು ಮತ್ತೊಬ್ಬನ ಆಟದ ಬಯಲು. ಈ ಕಾರಣದಿಂದ ಒಬ್ಬ ಮನುಷ್ಯನು ದಿನವನ್ನೆಲ್ಲಾ ಓದುವುದರಲ್ಲಿ ಕಳೆದು, ಬಿಡುವಿಗಾಗಿ ಉಳಿದ ಕಾಲವನ್ನು ಯಾವುದಾದರೂ ಕ್ರೀಡೆಗಳಿಗೆ ವಿನಿಯೋಗಿಸಿದರೆ ಅವನು ನಿಧಾನವಾಗಿ ಯೋಚಿಸುವ ಶಕ್ತಿಯನ್ನೇ ಕಳೆದುಕೊಳ್ಳುತ್ತಾನೆ. — ಯಾವಾಗಲೂ ಕುದುರೆಸವಾರಿ ಮಾಡುತ್ತಿರುವವನು ನಡೆಯುವುದನ್ನು ಮರೆಯುವಂತೆ. ಅನೇಕ ಪಂಡಿತರ ವಿಚಾರ ಹೀಗೆಯೆ. ಅವರು ಓದಿ ಓದಿ ಮೂರ್ಖರಾಗಿದ್ದಾರೆ. ಏಕೆಂದರೆ ವಿರಾಮದ ಪ್ರತಿಕ್ಷಣವನ್ನೂ ಓದುವುದರಿಂದಲೇ ತುಂಬುವುದು, ಯಾವಾಗಲೂ ಚೆಂಗೂಲಿಯನ್ನು ಮಾಡುತ್ತಿರುವುದಕ್ಕಿಂತಲೂ ಹೆಚ್ಚು ನಿತ್ರಾಣವನ್ನು ಮನಸ್ಸಿಗೆ ಉಂಟುಮಾಡುತ್ತದೆ. ದೇಹದ ಕೆಲಸಮಾಡುವುದರಲ್ಲಿ ಮನಸ್ಸಿನ ಯೋಚನೆಗಾದರೂ ಅವಕಾಶವಿರುವುದರಿಂದ, ಅದು ಯಾವಾಗಲೂ ಓದುತ್ತಿರುವುದಕ್ಕಿಂತ ಹೆಚ್ಚು ಉತ್ತಮವಾದುದು. ಹಾರುವ ಶಕ್ತಿಯುಳ್ಳ ಒಂದು ಪದಾರ್ಥದ ಮೇಲೆ ಬೇರೆ ಒಂದು ವಸ್ತುವನ್ನು ಬಹುಕಾಲದ ವರೆಗೆ ಇಟ್ಟಿದ್ದರೆ ಅದು ಕೊನೆಗೆ ತನ್ನ ಸ್ಥಿತಿಸ್ಥಾಪಕತೆಯನ್ನು ಕಳೆದುಕೊಳ್ಳುತ್ತದೆ. ಹಾಗೆಯೇ ಇತರ ಆಲೋಚನೆಗಳನ್ನು ಮನಸ್ಸಿನ ಮೇಲೆ ಬಲಾತ್ಕಾರವಾಗಿ ಕೂರಿಸಿದರೆ ಮನಸ್ಸೂ ತನ್ನ ಶಕ್ತಿ

ಯನ್ನು ಕಳೆದುಕೊಳ್ಳುತ್ತದೆ. ಆಹಾರವನ್ನು ಅತಿಯಾಗಿ ಸೇವಿಸಿ ಹೊಟ್ಟೆಯನ್ನೂ ದೇಹವನ್ನೂ ಕೆಡಿಸಿಕೊಳ್ಳುವುದು ಸಾಧ್ಯವಿರುವಂತೆ, ಮನಸ್ಸಿಗೂ ಹೆಚ್ಚು ಆಹಾರ ವನ್ನು ಕೊಟ್ಟು ಉಸಿರು ಕಟ್ಟಿಸಬಹುದು. ನೀವು ಎಷ್ಟು ಎಷ್ಟು ಹೆಚ್ಚಾಗಿ ವ್ಯಾಸಂಗಮಾಡಿದರೆ ನಿಮ್ಮ ಮನಸ್ಸಿನಲ್ಲಿ ಅದರ ಗುರುತು ಅಷ್ಟು ಕಡಿಮೆಯಾಗಿ ನಿಲ್ಲುತ್ತದೆ. ಪದೇಪದೇ ಒಂದು ಹಲಗೆಯ ಮೇಲೆ ಗೀಚಿದರೆ ಹೇಗೋ ಹಾಗೆ ಆಗುತ್ತದೆ. ಮನಸ್ಸು ಮೆಲಕುಮಾಡಿ ಧ್ಯಾನಮಾಡಲು ಕಾಲವೇ ದೊರೆಯುವು ದಿಲ್ಲ. ಈ ಬಗೆಯಾದ ಧ್ಯಾನದ ಹೊರತು ಓದುವುದನ್ನು ನಿಮ್ಮದಾಗಿ ಮಾಡಿ ಕೊಳ್ಳಲು ಬೇರೆ ಮಾರ್ಗವೇ ಇಲ್ಲ. ನಿಮ್ಮ ಮನಸ್ಸನ್ನು ಯೋಚನೆಗೆ ಪ್ರೇರಿಸದೆ ನೀವು ಸುಮ್ಮನೆ ಓದುತ್ತಲೇ ಇದ್ದರೆ ನೀವು ಓದಿದ ಸಂಗತಿಗಳು ನಿಮ್ಮ ಮನಸ್ಸಿ ನಲ್ಲಿ ಬೇರುಬಿಡದೆ ನಾಶವಾಗುತ್ತವೆ. ದೇಹದ ಆಹಾರದ ವಿಷಯ ಹೇಗೋ ಮನಸ್ಸಿನ ಆಹಾರದ ವಿಷಯವೂ ಹಾಗೆಯೇ. ನಾವು ತೆಗೆದುಕೊಳ್ಳುವ ಆಹಾರ ದಲ್ಲಿ ಐದರಲ್ಲಿ ಒಂದುಪಾಲೂ ದೇಹದೊಂದಿಗೆ ಸೇರಿಕೊಳ್ಳುವುದಿಲ್ಲ. ಉಳಿದುದು ಉಸಿರಿನಲ್ಲಿಯೂ ಬೆವರಿನಲ್ಲಿಯೂ ಇತರ ದಾರಿಗಳಲ್ಲಿಯೂ ಹೊರಟು ಹೋಗುತ್ತದೆ.

ಇವುಗಳೆಲ್ಲದರ ಫಲವೇನೆಂದರೆ ಪುಸ್ತಕಗಳಲ್ಲಿ ಬರುವ ಯೋಚನೆಗಳು ಮರಳಿನ ಮೇಲೆ ಕಾಣುವ ಹೆಜ್ಜೆಯ ಗುರುತುಗಳಿಗಿಂತ ಹೆಚ್ಚಾದುವುಗಳಲ್ಲ. ಮನುಷ್ಯನು ಹೋಗಿರುವ ದಾರಿ ನಿಮಗೆ ಕಾಣುವುದು. ಆದರೆ ಆ ದಾರಿಯಲ್ಲಿ ಅವನು ನೋಡಿದುದೇನೆಂಬುದು ನಿಮಗೆ ತಿಳಿಯಬೇಕಾದರೆ ನಿಮಗೂ ಅವನ ಕಣ್ಣುಗಳು ಬೇಕು.

ಮಾತಿನಿಂದ ವಾಚಕನನ್ನು ಒಡಂಬಡಿಸುವುದು, ಊಹನೆ, ಉಪಮಾನ, ಓಜಸ್ಸು, ಕಾಠಿಣ್ಯ, ಸಂಕ್ಷೇಪ, ಗಾಂಭೀರ್ಯ, ಮಾತಿನ ಸರಳತೆ, ವಿನೋದ, ಅನಿರೀಕ್ಷಿತವಾದ ವಿರುದ್ಧಭಾವಗಳು, ಸಂಕ್ಷೇಪೋಕ್ತಿ, ಸಹಜತೆ ಮುಂತಾದ ಉತ್ಕೃಷ್ಟವಾದ ಶೈಲಿಗಳು, ಆ ಶೈಲಿಗಳನ್ನುಳ್ಳ ಕವಿಗಳ ಕಾವ್ಯಗಳನ್ನು ಓದುವುದ ರಿಂದ ವಾಚಕನಿಗೆ ಬರುವುದಿಲ್ಲ. ಆದರೆ ಈ ಗುಣಗಳು ನಮ್ಮಲ್ಲಿ ಮೂಲಭೂತ ವಾಗಿ ಅಡಗಿದ್ದರೆ ಅವುಗಳನ್ನು ಎಚ್ಚರಿಸಿ ಜೀವಗೊಳಿಸಬಹುದು. ಅವುಗಳನ್ನು ಹೇಗೆ ಉಪಯೋಗಿಸಿಕೊಳ್ಳಬಹುದೆಂಬುದನ್ನು ತಿಳಿಯಬಹುದು; ನಮ್ಮಲ್ಲಿ ಅಡ ಗಿರುವ ಶಕ್ತಿಗಳನ್ನು ಉಪಯೋಗಿಸಿಕೊಳ್ಳಬಹುದೆಂಬ ಆಸೆಯನ್ನು ಬಲಪಡಿಸಿಕೊಳ್ಳ ಬಹುದು; ಉಪಯೋಗಿಸುವ ಧೈರ್ಯವೂ ನಮಗೆ ಉಂಟಾಗುವುದು. ಉದಾ ಹರಣೆಗಳನ್ನು ನೋಡಿ ಶೈಲಿಯನ್ನು ಉಪಯೋಗಿಸುವುದರ ಪರಿಣಾಮಗಳನ್ನು ವಿಮರ್ಶಿಸಿ ಆ ಶೈಲಿಯ ಯೋಗ್ಯವಾದ ಉಪಯೋಗವನ್ನು ಕಲಿಯಬಹುದು. ಅಂತೂ ನಾವು ಆ ಮಟ್ಟಕ್ಕೆ ಬಂದಾಗ ಮಾತ್ರವೇ ಆ ಯೋಗ್ಯತೆಗಳು ನಮ್ಮಲ್ಲಿವೆ ಎಂದು ಹೇಳಬಹುದು. ನಮ್ಮಲ್ಲಿ ಅಡಗಿರುವ ಸ್ವಾಭಾವಿಕವಾದ ನಮ್ಮ ಶಕ್ತಿ

ಗಳನ್ನು ತಿಳಿಸುವ ಮಾರ್ಗದಿಂದ ಮಾತ್ರ ಗ್ರಂಥವ್ಯಾಸಂಗವು ನಮ್ಮ ಶೈಲಿಗೆ ಸಹಾಯಕವಾಗಬಲ್ಲದು. ಅವುಗಳ ಪ್ರಯೋಜನವನ್ನು ನಾವು ಕಲಿಯುವುದಕ್ಕೆ ಮುಂಚೆ ಆ ಶಕ್ತಿಗಳು ನಮ್ಮಲ್ಲಿ ಇರಬೇಕು. ಆ ಶಕ್ತಿ ನಮ್ಮಲ್ಲಿ ಸ್ವಾಭಾವಿಕವಾಗಿ ಇಲ್ಲದೆ ಹೋದರೆ ಬರಿಯ ಗ್ರಂಥಪಠನವು, ನಮಗೆ ನಿರ್ವೀರ್ಯವಾದ ಹಳೆಯ ಪದ್ಧತಿಗಳನ್ನು ಕಲಿಸಿ ನಮ್ಮನ್ನು ತಿರುಳಿಲ್ಲದ ಅನುಕರಣೆಗಳನ್ನಾಗಿ ಮಾತ್ರ ಮಾಡುವುದು.

ಭೂಮಿಯ ಒಳಗಡೆ ಪೂರ್ವಕಾಲದಲ್ಲಿ ಬದುಕಿದ ಪ್ರಾಣಿಗಳ ಅವಶೇಷಗಳು ದೊರಕುತ್ತವೆ. ಹಾಗೆಯೇ ಪುಸ್ತಕಾಲಯದಲ್ಲಿರುವ ಗ್ರಂಥರಾಶಿಗಳು ಹಿಂದಲವರ ತಪ್ಪುಗಳನ್ನೂ ಅವು ಹೊರಬಿದ್ದ ರೀತಿಗಳನ್ನೂ ಕೂಡಿಸಿಟ್ಟಿರುತ್ತವೆ. ಆ ಪ್ರಾಣಿಗಳಂತೆ ಈ ಪುಸ್ತಕಗಳೂ ತಮ್ಮ ಕಾಲದಲ್ಲಿ ಜೀವದೊಂದಿಗೆ ಇದ್ದು ವಿಶೇಷ ಗದ್ದಲ ಮಾಡಿದುವು. ಆದರೆ ಈಗ ಅವು ಜಡವಾಗಿ, ಸಾಹಿತ್ಯದಲ್ಲಿ ಪ್ರಾಚೀನವಾದುವುಗಳನ್ನು ಸಂಗ್ರಹಿಸಲು ಹೊರಟವರಿಗೆ ಮಾತ್ರ ಕುತೂಹಲವನ್ನು ಉಂಟುಮಾಡುವವುಗಳಾಗಿವೆ.

ಕಣ್ಣು, ಎಟಕುವ ವರೆಗೆ ಪಸರಿಸಿದ್ದ ತನ್ನ ವಿಶಾಲವಾದ ಸೈನ್ಯವನ್ನು ಹೆರಡೋಟಸ್ ಚಕ್ರವರ್ತಿ ನೋಡಿ "ನೂರು ವರುಷಗಳ ನಂತರ ಇವರ ಪೈಕಿ ಒಬ್ಬನೂ ಜೀವಿಸಿರುವುದಿಲ್ಲವಲ್ಲ" ಎಂಬ ಯೋಚನೆಯಿಂದ ಅತ್ತನೆಂದು ಜೆರಕ್ಸ್ಸ್ ಹೇಳುತ್ತಾನೆ. ಹೊಸ ಪುಸ್ತಕಗಳ ದೊಡ್ಡ ಪಟ್ಟಿಯನ್ನು ನೋಡಿ ಹತ್ತು ವರುಷ ಕಳೆದ ಮೇಲೆ ಇವುಗಳೊಂದರ ಹೆಸರೂ ಜನಕ್ಕೆ ಜ್ಞಾಪಕವಿರುವುದಿಲ್ಲವೆಂದು ಯಾರಾದರೂ ಅಳಬಹುದಾಗಿದೆ.

ಜೀವನದಲ್ಲಿ ಹೇಗೋ ಸಾಹಿತ್ಯದಲ್ಲಿಯೂ ಹಾಗೆಯೇ. ಯಾವೆಡೆ ನೋಡಿದರೂ ತಿದ್ದುವುದಕ್ಕೆ ಅಸಾಧ್ಯವಾದ ಜನಸಮೂಹ ಬೇಸಿಗೆಯ ನೊಣಗಳಂತೆ ಎಲ್ಲೆಲ್ಲೂ ಜೊಯ್ ಎಂದು ಎಲ್ಲವನ್ನೂ ಹಾಳುಮಾಡುತ್ತಿರುವುದು ಕಣ್ಣಿಗೆ ಬೀಳುವುದು. ಈ ಕಾರಣದಿಂದಲೇ ಅಸಂಖ್ಯಾತವಾದ ಅನೇಕ ಕುಗ್ರಂಥಗಳು ಬರುತ್ತಿರುವುದು. ಇವುಗಳೇ ಸಾಹಿತ್ಯದ ಕಳೆಗಳು. ಈ ಕಳೆಗಳು ಗಿಡಕ್ಕೆ ಸಲ್ಲಬೇಕಾದ ಸಾರವನ್ನೆಲ್ಲಾ ಹೀರಿಬಿಡುತ್ತವೆ. ಒಳ್ಳೆಯ ಕಾವ್ಯಗಳಿಗೂ ಅವುಗಳ ಉದಾತ್ತ ಧ್ಯೇಯಗಳಿಗೂ ನ್ಯಾಯವಾಗಿ ದೊರಕಬೇಕಾದ ಜನರ ಲಕ್ಷ್ಯವನ್ನೂ ಹಣವನ್ನೂ ಈ ಕುಕಾವ್ಯಗಳು ಅಪಹರಿಸುತ್ತವೆ. ಇಂತಹ ಕುಗ್ರಂಥಗಳು ಅಧಿಕಾರವನ್ನೂ ಪ್ರತಿಷ್ಠೆಯನ್ನೂ ಹಣವನ್ನೂ ಸಂಪಾದಿಸುವ ಉದ್ದೇಶದಿಂದ ಮಾತ್ರವೇ ಹೊರಟಿರುತ್ತವೆ. ಆದುದರಿಂದ ಅವು ಅಪ್ರಯೋಜಕವಾದುವು ಮಾತ್ರವೇ ಅಲ್ಲ; ಅವುಗಳಿಂದ ಆಗುವ ಕೇಡುಕೂ ವಿಶೇಷವಾಗಿದೆ. ನಮ್ಮ ಸಾಹಿತ್ಯದಲ್ಲಿ ಹತ್ತರಲ್ಲಿ

ಒಂಟಿತ್ತು ಪಾಲಿಗೆ ಬನರ ಜೇಬಿನಲ್ಲಿರುವ ನಾಲ್ಕು ಕಾಸುಗಳನ್ನು ಕೀಳುವುದರ ಹೊರತು ಬೇರೆ ಉದ್ದೇಶವೇ ಇಲ್ಲ. ಈ ಹಣ ಸಂಪಾದನೆಗಾಗಿ ಲೇಖಕನೂ ಪ್ರಕಾಶಕನೂ ವಿಮರ್ಶಕನೂ ಒಂದಾಗಿ ಪಿತೂರಿ ನಡೆಸುತ್ತಾರೆ.

ಸಾಹಿತಿಗಳೂ, ಕವಿಗಳೂ ಗ್ರಂಥಕರ್ತರೂ ದೊಡ್ಡ ದೊಡ್ಡ ಪುಸ್ತಕಗಳನ್ನು ಬರೆಯುವವರೂ, ತಮಗೆ ಲಾಭಕರವೂ ಫಲಕಾರಿಯೂ ಆಗುವಂತೆ ಅನುಸರಿಸುತ್ತಿರುವ ಒಂದು ಮೋಸದ ಚಮತ್ಕಾರವನ್ನು ಇಲ್ಲಿ ಹೇಳುತ್ತೇನೆ. ಸಂಸ್ಕೃತಿಗೂ ನಾಗರೀಕತೆಗೂ ಸ್ವಲ್ಪವೂ ಲಕ್ಷ್ಯ ಕೊಡದೆ, ಸುಧಾರಿಸಿದ ಜನರೆಲ್ಲಾ ಏಕಕಾಲದಲ್ಲಿ ಒಂದೇ ವಿಷಯವನ್ನು ಅಂದರೆ ಹೊಸದಾಗಿ ಪ್ರಕಟವಾದ ಪುಸ್ತಕಗಳನ್ನು ಕುರಿತು ಓದುವಂತೆ ಅವರಿಗೆ ಮೂಗುದಾರವನ್ನು ಹಾಕಿ ಪ್ರೇರಿಸುವುದೇ ಈ ಚಮತ್ಕಾರವಾಗಿದೆ. ತಾವು ವ್ಯವಹರಿಸುವ ಪ್ರಪಂಚದಲ್ಲಿ ಸಂಭಾಷಣೆಯ ವಸ್ತು ದೊರಕಬೇಕೆಂದು ಅವರು ಹೀಗೆ ಮಾಡುತ್ತಾರೆ. ಒಂದು ಕಾಲದಲ್ಲಿ ಪ್ರಸಿದ್ಧವಾಗಿದ್ದ ಸ್ಪಿಂಡರ್, ಬುಲ್‌ವರ್ ಲಿಟ್ಟನ್, ಯುಗೆನಿ ಸು (Spinder, Bulwar Lytton, Eugene Sue) ಮುಂತಾದವರ ಕೆಟ್ಟ ಕಾದಂಬರಿಗಳಿಂದ ಉಂಟಾಗತಕ್ಕ ಪ್ರಯೋಜನವು ಇದೆಯೆ. ಇಂತಹ ಲೇಖಕರು ಹಣ ಸಂಪಾದನೆಗಾಗಿಯೇ ಬರೆಯುವವರಾದುದರಿಂದ ಅವರ ಸಂಖ್ಯೆ ಕಡಿಮೆ ಇಲ್ಲ. ಅಂತಹ ತೀರ ಸಾಮಾನ್ಯರಾದ ಲೇಖಕರ "ಹೊಸ ಪುಸ್ತಕ"ಗಳನ್ನು ಓದಿಯೇ ತೀರಬೇಕಾದ ವಾಚಕರ ಸ್ಥಿತಿಯು ತುಂಬ ಶೋಚನೀಯವಾದುದು. ಈ ಸಾಮಾನ್ಯ ಗ್ರಂಥಗಳ ವ್ಯಾಸಂಗದ ಲಾಭಕ್ಕಾಗಿ, ಆ ವಾಚಕರು ಜಗತ್ತಿನಲ್ಲಿ ಪ್ರಸಿದ್ಧರಾದ ವಿರಳರಾದ ಮಹನೀಯರ ಕೃತಿಗಳ ಹೆಸರನ್ನು ಮಾತ್ರ ತಿಳಿದುಕೊಂಡರೆ ಸಾಕೆಂದು ತೃಪ್ತರಾಗುತ್ತಾರೆ. ಸಾಹಿತ್ಯ–ವೃತ್ತಪತ್ರಿಕೆಗಳು ಅದ್ವಿತೀಯವಾದ ಮೋಸದ ಸಾಧನೆಗಳು. ಜನರಿಗೆ ನಿಜವಾದ ಸಂಸ್ಕೃತಿಯು ಹಸ್ತಗತವಾಗಬೇಕಾದರೆ, ನೈಜವಾದ ಸಾಹಿತ್ಯರತ್ನಗಳನ್ನು ಅವರು ಅಭ್ಯಾಸಮಾಡಬೇಕು. ಸಾಹಿತ್ಯಪತ್ರಿಕಗಳು ಸಾಮಾನ್ಯ ಜನರ ನಿತ್ಯವ್ಯವಹಾರದ ಅಲ್ಪ ವಿಷಯಗಳಲ್ಲಿ ತೊಡಗಿರುವುದರಿಂದ ಜನರ ಅಮೌಲ್ಯವಾದ ಕಾಲವನ್ನೆಲ್ಲಾ ಅಪಹರಿಸುತ್ತವೆ.

ಆದುದರಿಂದ ಓದುವ ವಿಚಾರದಲ್ಲಿ ಸಂಯಮವು ಆವಶ್ಯಕವಾದುದು. ಒಂದು ಗ್ರಂಥವನ್ನು ಒಂದು ಕಾಲದಲ್ಲಿ ಅನೇಕರು ಓದುತ್ತಿರಬಹುದು. ರಾಜಕೀಯ, ಧಾರ್ಮಿಕ, ಕಾದಂಬರಿ, ಕವಿತೆ ಇವುಗಳಲ್ಲ ಯಾವುದಾದರೂ ಅತ್ಯಂತ ಪ್ರಸಿದ್ಧವಾಗಿ ಅದರ ಮೊದಲನೆಯ ವರುಷದಲ್ಲಿಯೇ— ಅದರ ಕಡೆಯ ವರುಷವೂ ಅದೆಯೆ — ಅನೇಕ ಮುದ್ರಣಗಳು ಆಗಬಹುದು. ಆದರೂ ಆ ಗ್ರಂಥವನ್ನು ತೆಗೆದುಕೊಳ್ಳದೆ ಇರುವುದೇ ಸಂಯಮದಲ್ಲಿ ಇರಬೇಕಾದ ಬುದ್ಧಿವಂತಿಕೆ. ಬುದ್ಧಿಹೀನರಿಗಾಗಿ ಬರೆಯುವ ಗ್ರಂಥಕರ್ತನಿಗೆ ಯಾವಾಗಲೂ ವಾಚಕರು ಹೆಚ್ಚು ಎಂಬು

ದನ್ನು ಮರೆಯದಿರಿ. ಜಗತ್ತಿನ ಯಾವ ದೇಶದವರಾಗಿರಲಿ–ಯಾವ ಕಾಲದವರಾಗಿರಲಿ ಮಹನೀಯರೆಂದು ಪ್ರಸಿದ್ಧರಾದವರ ಕೃತಿಗಳಿಗೆ ಮಾತ್ರ ನಿಮ್ಮ ಕಾಲವನ್ನು ವಿನಿಯೋಗಿಸಿ. ಆ ಮಹನೀಯರು ಉಳಿದ ಮನುಷ್ಯಪ್ರಪಂಚವನ್ನು ಮೀರಿ ಎದ್ದು ನಿಂತಿದ್ದಾರೆ. ಅವರೇ ಜ್ಞಾನಸಬೋಧಕರು ಮತ್ತು ಗುರುಗಳು. ಕೆಟ್ಟ ಸಾಹಿತ್ಯ ಎಷ್ಟು ಕಡಿಮೆ ಎಂದು ಓದಿದರೂ ಅಪಾಯವೆ. ಒಳ್ಳೆಯ ಸಾಹಿತ್ಯ ಎಷ್ಟು ಹೆಚ್ಚಾದರೂ ಅತಿಯಾಗುವುದಿಲ್ಲ. ಕುಕಾವ್ಯಗಳು ಬುದ್ಧಿಗೆ ವಿಷದಂತೆ. ಅವು ಮನಸ್ಸನ್ನು ನಾಶಮಾಡುತ್ತವೆ. ಎಂದೆಂದಿಗೂ ಯಾವುದು ಶಾಶ್ವತವಾಗಿ ಅತ್ಯುತ್ತಮವಾದುದೋ ಅದನ್ನು ಬಿಟ್ಟು ಯಾವುದು ಹೊಸದೋ ಅದನ್ನು ಮಾತ್ರ ಜನರು ಓದುವುದರಿಂದ, ಆ ಕಾಲದಲ್ಲಿ ಪ್ರಚಾರದಲ್ಲಿರುವ ಸಂಕುಚಿತವಾದ ಅಭಿಪ್ರಾಯಗಳ ವಾತಾವರಣದಲ್ಲಿಯೇ ಬರಹಗಾರರು ಇರುತ್ತಾರೆ. ಅದರಿಂದ ಆ ಲೇಖಕರ ಕಾಲವು, ತಾನೇ ಸೃಷ್ಟಿಸಿಕೊಂಡ ಅಧಃಪಾತಾಳಕ್ಕೆ ನಿಧಾನವಾಗಿ ಹೂಳಿ ಹೋಗುತ್ತದೆ.

ಸಾಹಿತ್ಯದಲ್ಲಿ ಯಾವಾಗಲೂ ಎರಡು ಪ್ರವಾಹಗಳಿರುತ್ತವೆ. ಇವು ಒಂದರ ಮಗ್ಗುಲಲ್ಲಿ ಒಂದು ಹರಿಯುತ್ತಿರುತ್ತವೆ ಒಂದರ ವಿಚಾರ ಮತ್ತೊಂದಕ್ಕೆ ತಿಳಿದಿರುವುದಿಲ್ಲ. ಇವುಗಳಲ್ಲಿ ನಿಜವಾದ ಸಾಹಿತ್ಯ ಒಂದು. ಹೊರಗಡೆಯ ತೋರಿಕೆಗಾಗಿ ಇರುವುದು ಮತ್ತೊಂದು. ಮೊದಲನೆಯದು ಶಾಶ್ವತವಾದ ಸಾಹಿತ್ಯವಾಗಿ ಬೆಳೆಯುತ್ತದೆ. ವಿಜ್ಞಾನ ಮತ್ತು ಕಾವ್ಯಗಳಲ್ಲಿ ಜೀವವುಳ್ಳವರು ಅದನ್ನು ಅನುಸರಿಸುತ್ತಾರೆ. ಅದರ ಪ್ರವಾಹವು ಶಾಂತವೂ ಗಂಭೀರವೂ ಆದರೆ ಬಹು ನಿಧಾನವೂ ಆದುದು. ಅದು ಯೂರೋಪಿನಲ್ಲಿ ಒಂದು ಶತಮಾನದಲ್ಲಿ ಹತ್ತುಹನ್ನೆರಡು ಕೃತಿಗಳನ್ನು ಮಾತ್ರ ಸೃಷ್ಟಿಸುತ್ತದೆ. ಆದರೆ ಆ ಕೃತಿಗಳು ಶಾಶ್ವತವಾದುವು. ಎರಡನೆಯ ಸಾಹಿತ್ಯದ ಪ್ರವಾಹವನ್ನು ವಿಜ್ಞಾನ ಅಥವ ಕಾವ್ಯದಿಂದ ಜೀವಿಸುವವರು ಅನುಸರಿಸುತ್ತಾರೆ. ಆ ಪ್ರವಾಹವು ತುಂಬ ಗದ್ದಲಮಾಡಿಕೊಂಡು ಅಶ್ವಾರೂಢವಾಗಿ ಅನುಯಾಯಿಗಳಿಂದ ಹೊಗಳಿಸಿಕೊಂಡು ಹೊರಡುತ್ತದೆ. ಅದು ವರುಷಕ್ಕೆ ಸಾವಿರಾರು ಗ್ರಂಥಗಳನ್ನು ಹೊರಕ್ಕೆ ಹಾಕುತ್ತದೆ. ಆದರೆ ನಾಲ್ಕಾರು ವರುಷಗಳ ನಂತರ "ಅವುಗಳೆಲ್ಲಾ ಎಲ್ಲಿ? ಅಷ್ಟು ಬೇಗ ಬಂದು ಅಷ್ಟೊಂದು ಗದ್ದಲವನ್ನು ಮಾಡಿದ ಆ ವೈಭವವೆಲ್ಲಾ ಎಲ್ಲಿ?" ಎಂದು ಯಾರಾದರೂ ಕೇಳಬೇಕಾಗುತ್ತದೆ. ಈ ಎರಡನೆಯ ಪ್ರವಾಹಕ್ಕೆ ಸೇರಿದುದನ್ನು ಕ್ಷಣಿಕವಾದ ಸಾಹಿತ್ಯವೆಂದೂ, ಮೊದಲನೆಯದನ್ನು ಸ್ಥಿರವಾದ ಶಾಶ್ವತವಾದ ಸಾಹಿತ್ಯವೆಂದೂ ಕರೆಯಬಹುದು.

ರಾಜಕೀಯದ ಇತಿಹಾಸದಲ್ಲಿ ಅರ್ಧಶತಮಾನವೆಂದರೆ ತಕ್ಕಮಟ್ಟಿಗೆ ಹೆಚ್ಚು ಕಾಲ. ಆ ಕಾಲಕ್ಕೆ ಸಂಬಂಧಪಟ್ಟ ವಿಷಯಗಳು ಐವತ್ತು ವರುಷಗಳಲ್ಲೂ ಸ್ವಲ್ಪ ಸ್ವಲ್ಪವಾಗಿ ಮುಂದುವರಿಯುತ್ತಲೇ ಇರುತ್ತವೆ. ಆದರೆ ಸಾಹಿತ್ಯದ ಇತಿಹಾಸದಲ್ಲಿ

ಅನೇಕ ವೇಳೆ 50 ವರುಷವೆಂದರೆ ಇದ್ದಲ್ಲಿಯೇ ಇದ್ದಂತೆ ಏನೂ ಸಂಭವಿಸಿಯೇ ಇರುವುದಿಲ್ಲ. ತುಚ್ಛವಾದ ಪ್ರಯತ್ನಗಳು ನಡೆದಿದ್ದರೂ ಅವು ನಡೆಯದಿದ್ದಂತೆಯೇ ಸರಿ. ಮೊದಲು ಎಲ್ಲಿ ಇದ್ದೆವೋ 50 ವರುಷಗಳ ನಂತರವೂ ಅಲ್ಲೇ ಇರುತ್ತೇವೆ.

ನನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸಲು ಮನುಷ್ಯನ ಜ್ಞಾನಾರ್ಜನೆಯನ್ನು ಒಂದು ಗ್ರಹಗತಿಗೆ ಹೋಲಿಸುತ್ತೇನೆ. ಜ್ಞಾನದಲ್ಲಿ ಮುಖ್ಯವಾದ ಒಂದು ಮೆಟ್ಟಿಲನ್ನು ಏರಿದ ನಂತರ ಮನುಷ್ಯಸಮಾಜವು ಸಾಧಾರಣವಾಗಿ ಇಡುವ ತಪ್ಪು ಹೆಜ್ಜೆಗಳು ಗ್ರಹಗತಿಯ ಉಪಚಕ್ರಗಳಂತೆ. ಅವುಗಳ ಮೂಲಕ ಹಾದು ಹೋದ ಮೇಲೂ, ಜಗತ್ತು ಮೊದಲು ಎಲ್ಲಿ ಇದ್ದಿತೋ ಅಲ್ಲೇ ಇರುತ್ತದೆ. ಆದರೆ ಜಗತ್ತಿಗೆ ನಿಜವಾಗಿಯೂ ಮಂಗಳವನ್ನುಂಟುಮಾಡುವ ಮಹನೀಯರು ಆಗಾಗ ಸಂಭವಿಸುವ ಈ ಉಪಚಕ್ರಗಳನ್ನು ಅನುಸರಿಸುವುದಿಲ್ಲ. ಇದರಿಂದ ವರ್ತಮಾನಕಾಲದ ಸಂಗತಿಗಳನ್ನು ಮೆಟ್ಟಿ ಹಿಂದಲವರ ಪ್ರಸಿದ್ಧಿಯು ಹೇಗೆ ಉಂಟಾಗುವುದೆಂಬುದು ವ್ಯಕ್ತವಾಗುತ್ತದೆ. ಫಿಟ್‌ಜೆ ಮತ್ತು ಶೆಲ್ಲಿಂಗ್ ಪ್ರಾರಂಭಿಸಿ ಹೀಗಲ್ ಆಭಾಸವಾಗಿ ಕೊನೆ ಮುಟ್ಟಿಸಿದ ವೇದಾಂತ ವಾದವು ಈ ಉಪಚಕ್ರಗತಿಗೆ ಒಂದು ಉದಾಹರಣೆ ಈ ಉಪಚಕ್ರವು, ಕ್ಯಾಂಟ್ ವೇದಾಂತವನ್ನು ಯಾವ ಕೊನೆಗೆ ಮುಟ್ಟಿಸಿದನೋ, ಆ ಕೊನೆಯಿಂದ ಅಡ್ಡದಾರಿ. ಅಲ್ಲಿಂದ ನಾನು ಅದನ್ನು ಮುಂದಕ್ಕೆ ತೆಗೆದುಕೊಂಡು ಹೋದೆನು. ಆ ಮಧ್ಯದಲ್ಲಿ ನಾನು ಮೊದಲು ತಿಳಿಸಿದ ಸುಳ್ಳು ವೇದಾಂತಿಗಳೂ ಇನ್ನೂ ಉಳಿದವರೂ ಆ ಕೊನೆಯಿಂದ ಉಪಚಕ್ರವನ್ನು ಪ್ರಾರಂಭಿಸಿದರು. ಇದರಿಂದ, ಅವರನ್ನು ಅನುಸರಿಸಿದವರಿಗೆ ತಾವು ಎಲ್ಲಿ ಮೊದಲು ಪ್ರಾರಂಭಿಸಿದೆವೋ ಅಲ್ಲೇ ಇರುವೆವೆಂಬುದು ಗೊತ್ತಾಯಿತು.

ಕಾಲದ ದೃಷ್ಟಿಯಿಂದ ಮುವ್ವತ್ತು ವರುಷಕ್ಕೆ ಒಂದು ಸಲ ಸಾಹಿತ್ಯದಲ್ಲೂ ಲಲಿತಕಲೆಗಳಲ್ಲೂ ದಿವಾಳಿತನವು ಒದಗುವುದೆಂದು ಹೇಳುವುದಕ್ಕೆ ಕಾರಣ ಇದರಿಂದ ವ್ಯಕ್ತವಾಗುತ್ತದೆ. ಆಗಾಗ್ಗೆ ತೋರುವ ದೋಷಗಳು ಮುವ್ವತ್ತು ವರುಷಕ್ಕೆ ಒಂದು ಸಲ ಒಂದರ ಮೇಲೆ ಒಂದು ಏರಿಕೊಂಡು ಅವುಗಳ ಭಾರಕ್ಕೇ ಆ ಕಟ್ಟಡವು ಕುಸಿದು ಬೀಳುತ್ತದೆ. ಆ ಮುವ್ವತ್ತೂ ವರುಷಗಳೂ, ಅದರ ವಿರೋಧಪಕ್ಷದ ಬಲವು ಬೆಳೆಯುತ್ತಲೇ ಹೋಗುತ್ತದೆ. ಆಗ ಎಲ್ಲಾ ತಲೆಕೆಳಗಾಗುತ್ತದೆ. ಕ್ಲಿಪ್ತವಾದ ಕಾಲಗಳಲ್ಲಿ ಉಂಟಾಗುವ ಈ ಬಗೆಯ ಚಲನವಲನಗಳನ್ನು ಪ್ರಕಟಿಸುವುದೇ ಸಾಹಿತ್ಯದ ಇತಿಹಾಸದ ನಿಜವಾದ ಮತ್ತು ಉಪಯುಕ್ತವಾದ ಗುರಿಯಾಗಿರಬೇಕು. ಆದರೆ ಇದಕ್ಕೆ ಬಹಳ ಸ್ವಲ್ಪ ಲಕ್ಷ್ಯವು ಸಂದಿದೆ. ಮತ್ತು ಇಂತಹ ವ್ಯತ್ಯಾಸಗಳು ನಡೆಯತಕ್ಕ ಕಾಲಗಳ ಅವಧಿಯು ಅತಿ ಸ್ವಲ್ಪವಾಗಿರುವುದರಿಂದ ಕಳೆದು ಹೋದ ಕಾಲಕ್ಕೆಲ್ಲಾ ಇತಿಹಾಸವನ್ನು ಬರೆಯುವುದು ಕಷ್ಟವಾಗುವುದು. ಆದರೆ ಒಂದು ತಲೆಮಾರಿನಲ್ಲಿ ಸಂಭವಿಸುವುದನ್ನು ನಿರೀಕ್ಷಿಸುವುದು ಬಹಳ ಸುಲಭವಾಗುವುದು.

........ಯಾವ ಸಾಹಿತ್ಯದ ಇತಿಹಾಸವೂ ಕುರೂಪಿಗಳ ಪ್ರದರ್ಶನಾಲಯದ ಪಟ್ಟಿಯಂತೆ. ಒಳ್ಳೆ ಆಕೃತಿಯಲ್ಲಿ ಹುಟ್ಟಿಬೆಳೆದ ಪ್ರಾಣಿಗಳಿಗಾಗಿ ಅಲ್ಲಿ ನೋಡ ಬೇಕಾದುದಿಲ್ಲ. ಅವು ಇನ್ನೂ ಬದುಕಿವೆ, ಜಗತ್ತಿನಲ್ಲಿ ಶಾಶ್ವತವಾಗಿ ನಿಂತು ಬೆಳೆಯುತ್ತಿವೆ. ಅವೇ ನಿಜವಾದ ಸಾಹಿತ್ಯ ಸೇರಿದುವು. ಅವುಗಳ ಇತಿಹಾಸವು ಗ್ರಂಥದಲ್ಲಿ ಪ್ರಕಟವಾಗುವುದಕ್ಕೆ ಮುಂಚೆಯೆ ನಮಗೆ ನಮ್ಮ ಯೌವನದಿಂದಲೇ, ಎಲ್ಲಾ ವಿವೇಕಿಗಳ ಬಾಯಿನಿಂದಲೂ ತಿಳಿಯುತ್ತದೆ.

ಯಾವ ವಿಷಯದ ಮೇಲೂ ನಿಜವಾದ ಜ್ಞಾನವನ್ನು ಸಂಪಾದಿಸದೆ, ಎಲ್ಲವು ಗಳ ಮೇಲೂ ನಾಲ್ಕು ಮಾತುಗಳನ್ನಾಡಲು ಅನುಕೂಲವಾಗಲೆಂದು ಸಾಹಿತ್ಯದ ಇತಿಹಾಸಗಳನ್ನು ಓದುವ ಈಗಿನ ಹುಚ್ಚರಿಗೆ ಲಿಚಟೆನ್‌ಬರ್ಗ್ (Lichtenberg)ನ ಈ ಕೆಳಗಿನ ಮಾತುಗಳು ಗಮನಾರ್ಹವಾದುವು.

"ಶಾಸ್ತ್ರ ಮತ್ತು ವಿಜ್ಞಾನಗಳ ಇತಿಹಾಸವನ್ನು ವಿವರವಾಗಿ ತಿಳಿಯಬೇಕೆಂಬ ಈಗಿನ ಪದ್ಧತಿಯಿಂದ, ಜ್ಞಾನದ ಸಂಪಾದನೆಗೇ ಕುಂದಕವೆಂದು ನನ್ನ ನಂಬಿಕೆ. ಈ ಇತಿಹಾಸಗಳನ್ನು ವ್ಯಾಸಂಗ ಮಾಡುವುದರಲ್ಲಿ ಸಂತೋಷವೇನೋ ಇದೆ. ಆದರೆ ಆ ವ್ಯಾಸಂಗವು ಮನಸ್ಸನ್ನು ಬರಿದಾಗಿ ಇಡುವುದಿಲ್ಲವೆಂಬುದು ನಿಶ್ಚಯ. ವಾಸ್ತವವಾಗಿ ಮನಸ್ಸಿನಲ್ಲಿ ಇತರ ವಿಷಯಗಳು ತುಂಬಿಕೊಳ್ಳುವುದರಿಂದ ಅದು ತನ್ನ ಸ್ವಂತ ಶಕ್ತಿಯನ್ನು ಕಳೆದುಕೊಳ್ಳುತ್ತದೆ. ಮನಸ್ಸನ್ನು ಭರ್ತಿಮಾಡಿಕೊಳ್ಳುವು ದಕ್ಕೆ ಮಾತ್ರವೇ ಅಲ್ಲದೆ, ಮನಸ್ಸಿನ ಶಕ್ತಿಯನ್ನು ಹೆಚ್ಚಿಸಿಕೊಂಡು ತನ್ನ ನೈಸರ್ಗಿಕ ಗುಣಗಳನ್ನೂ ಬೆಳವಣಿಗೆಯನ್ನೂ ಪೂರ್ಣವಾಗಿ ಮಾಡಿಕೊಳ್ಳಬೇಕೆನ್ನುವವರಿಗೆ, ಇತಿಹಾಸ ವಿಮರ್ಶಕನ ಸಹವಾಸದಷ್ಟು ಮನಸ್ಸಿಗೆ ದೌರ್ಬಲ್ಯವನ್ನುಂಟುಮಾಡು ವುದು ಮತ್ತಾವುದೂ ಇಲ್ಲವೆಂದು ಕೂಡಲೇ ಗೊತ್ತಾಗುವುದು. ಸಾಹಿತ್ಯಾಭ್ಯಾಸಿ ಗಳಿಗೆ ಸಾಹಿತ್ಯಜ್ಞಾನವು ಸ್ವಲ್ಪವೂ ಇಲ್ಲದಿದ್ದರೂ ಸಾಹಿತ್ಯದ ಇತಿಹಾಸಕ್ಕೆ ಸಂಬಂಧಪಟ್ಟ ಸಾವಿರಾರು ಸಣ್ಣ ಸಣ್ಣ ವಿಷಯಗಳು ತಿಳಿದಿರುತ್ತವೆ. ಇದು ಹಸಿವಾಗಿರುವಾಗ ಪಾಕಶಾಸ್ತ್ರವನ್ನು ವ್ಯಾಸಂಗಮಾಡಿದಂತೆ. ತಮ್ಮ ಯೋಗ್ಯತೆ ಯನ್ನೂ ನಿಜವಾದ ಜ್ಞಾನದ ಬೆಲೆಯನ್ನೂ ತಿಳಿದ ವಿವೇಕಿಗಳ ಮಧ್ಯದಲ್ಲಿ ಸಾಹಿತ್ಯದ ಇತಿಹಾಸವು (History of Literature) ಎಂದಿಗೂ ಬದುಕುವುದಿಲ್ಲವೆಂದು ನನ್ನ ನಂಬಿಕೆ. ವಿವೇಕಿಗಳು ಇತರರು ತಮ್ಮ ಬುದ್ಧಿಯನ್ನು ಹೇಗೆ ಉಪಯೋಗಿಸಿ ಕೊಂಡರೆಂಬುದನ್ನು ತಿಳಿಯುವುದಕ್ಕಿಂತ ತಮ್ಮ ವಿವೇಕವನ್ನು ತಾವು ಹೇಗೆ ಉಪ ಯೋಗಿಸಬೇಕೆಂಬುದನ್ನು ತಿಳಿಯುವುದರಲ್ಲಿ ಹೆಚ್ಚು ಕಾಲವನ್ನು ಕಳೆಯುತ್ತಾರೆ. ಜ್ಞಾನವು ಸಾಹಿತ್ಯದ ಇತಿಹಾಸದ ಸಂಶೋಧನೆಯಲ್ಲಿ ತೊಡಗಿದರೆ ಜ್ಞಾನವನ್ನು ಉದ್ದೀಪನಮಾಡುವ ಅದರ ಶಕ್ತಿಯು ಕಡಿಮೆಯಾಗುತ್ತದೆ. ಜ್ಞಾನವಿದೆಯೆಂಬ

ಹೆಮ್ಮೆ ಮಾತ್ರ ಹೆಚ್ಚಾಗುತ್ತದೆ. ಸಂಶೋಧಕರು ನಿಜವಾದ ಜ್ಞಾನಿಗಳಿಗಿಂತ ತಾವೇ ಹೆಚ್ಚು ಜ್ಞಾನಿಗಳೆಂದು ತಿಳಿಯುತ್ತಾರೆ ಜ್ಞಾನವು ತಾನು ಯಾರಲ್ಲಿ ಇದೆಯೋ ಅವನಿಗೆ ಹೆಮ್ಮೆಯನ್ನು ಉಂಟುಮಾಡುವುದಿಲ್ಲವೆಂಬುದು ನಿಶ್ಚಯ. ತಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳಲು ಸಾಧ್ಯವಾಗದೆ, ಇತರರು ಏನು ಮಾಡಿದ ರೆಂಬುದನ್ನೂ ಯಾಕೆ ಮಾಡಲಿಲ್ಲವೆಂಬುದನ್ನೂ ಹೇಳುವವರು ಮಾತ್ರ ಹೆಮ್ಮೆ ಯಿಂದ ಹಾರಿ ಹೋಗುತ್ತಾರೆ. ಅವರಿಗೆ ಹೆಮ್ಮೆ ಯಾಕೆಂದರೆ ಯಂತ್ರದೋಪಾದಿ ಯಲ್ಲಿಯ ಈ ಕೆಲಸವೇ ಜ್ಞಾನದ ಅನುಸರಣೆ ಎಂದು ಅವರು ತಿಳಿಯುತ್ತಾರೆ. ನನ್ನ ಅಭಿಪ್ರಾಯವೇನೆಂಬುದನ್ನು ಉದಾಹರಣೆಗಳಿಂದ ತೋರಿಸಬಲ್ಲೆ. ಆದರೆ ಅದು ಬಹು ಅಸಹ್ಯದ ಕೆಲಸವಾಗುವುದು.''

ಆದರೂ, ತಾವು ಜನಿಸಿದ ದೇಶದ ಅಮೌಲ್ಯ ರತ್ನಗಳೆನಿಸಿದ ಕವಿಗಳನ್ನೂ ಕಲಾವಿದರನ್ನೂ ಜನರು ಅವರ ಜೀವಿತಕಾಲದಲ್ಲಿ ಹೇಗೆ ಆಚರಿಸಿದರೆಂಬ ಕರುಣಾ ಜನಕವಾದ ಇತಿಹಾಸವನ್ನು ಬರೆಯಲು ಯಾರಾದರೂ ಪ್ರಯತ್ನಿಸಬೇಕೆಂದು ನಾನು ಬಯಸುತ್ತೇನೆ. ಅಂತಹ ಇತಿಹಾಸವು ಎಲ್ಲಾ ದೇಶಗಳಲ್ಲೂ ಎಲ್ಲಾ ಕಾಲಗಳಲ್ಲೂ ಉತ್ತಮವೂ ಶ್ರೇಷ್ಠವೂ ಆದುದು ನೀಚವೂ ತಿರಸ್ಕೃತವೂ ಆದುದ ರೊಂದಿಗೆ ಹೇಗೆ ಎಡೆಬಿಡದೆ ಹೋರಾಡಬೇಕಾಯಿತೆಂಬುದನ್ನು ತೋರಿಸುತ್ತದೆ.

---

# ಶೈಲಿ

ಶೈಲಿಯು ಮನಸ್ಸಿನ ಮುಖಚರ್ಯೆ. ಮತ್ತು ಮನುಷ್ಯನ ನಡತೆಗೆ ಅವನ ಮುಖಕ್ಕಿಂತಲೂ ಹೆಚ್ಚು ಸರಾಗವಾದ ಗುರುತು. ಮತ್ತೊಬ್ಬನ ಶೈಲಿಯನ್ನು ಅನುಸರಿಸುವುದು ಒಂದು ಮುಸುಕು (ಮೊಕವಾಡ) ಹಾಕಿಕೊಂಡಂತೆ. ಆ ಮುಸುಕು ಎಷ್ಟೇ ಚೆನ್ನಾಗಿದ್ದರೂ ಸ್ವಲ್ಪಕಾಲದೊಳಗೆ ಅದನ್ನು ಕಂಡರೆ ನಮಗೆ ಅಸಹ್ಯವುಂಟಾಗುವುದು. ಯಾಕೆಂದರೆ ಅದು ಜೀವರಹಿತವಾದುದು ಆದುದರಿಂದ ಹಳೆಯ ಗ್ರಂಥಕರ್ತರ ದಾರಿಯನ್ನು ಅನುಸರಿಸಿಕೊಂಡು ಲ್ಯಾಟಿನ್ ಭಾಷೆಯಲ್ಲಿ ಬರೆಯುತ್ತಿರುವವರು ತಮ್ಮ ಮುಸುಕಿನ ಮೂಲಕ ಮಾತನಾಡುತ್ತಿದ್ದಾರೆಂದು ನಾವು ಹೇಳಬಹುದು. ವಾಚಕನು ಅವರು ಹೇಳುವುದನ್ನು ಕೇಳುತ್ತಾನೆಂಬುದು ನಿಜ. ಆದರೆ ಅವರ ಮುಖಭಾವ ಅವನಿಗೆ ಕಾಣುವುದಿಲ್ಲ. ಅವರ ಶೈಲಿಯು ಅವನಿಗೆ ಕಾಣುವುದಿಲ್ಲ. ಆದರೆ ಚೆನ್ನಾಗಿ ಆಲೋಚನೆ ಮಾಡಿದ್ದರೆ ಲ್ಯಾಟಿನ್ ಬರಹಗಾರರ ಶೈಲಿಯೂ ಒಡೆದು ಕಾಣುತ್ತದೆ. ಯಾವ ವಿಧವಾದ ಅನುಕರಣೆಯನ್ನೂ ಮಾಡದಿರುವ ಎಲ್ಲಾ ಬರಹಗಾರರಿಗೂ ಈ ಮಾತು ಅನ್ವಯಿಸುತ್ತದೆ. ಉದಾಹರಣೆಗೆ ಸ್ಕೊಟಸ್ ಎರಿಜೆನ (Scotus Erigena), ಪೆಟ್ರಾರ್ಚ್ (Petrarch), ಬೇಕನ್ (Bacon), ಡೆಸ್ ಕಾರ್ಟೆಸ್ (Des Cartes), ಸ್ಪಿನೋಜ (Spinoza) ಮುಂತಾದವರನ್ನು ತೆಗೆದುಕೊಳ್ಳಬಹುದು ಶೈಲಿಯಲ್ಲಿ ಆಡಂಬರವು ಮಾತನಾಡುವಾಗ ಮುಖಚೇಷ್ಟೆ ಮಾಡಿದಂತೆ. ಒಬ್ಬ ಲೇಖಕನು ಯಾವ ಭಾಷೆಯಲ್ಲಿ ಬರೆಯುತ್ತಾನೋ ಆ ಭಾಷೆಯು ಅವನ ಮುಖಚರ್ಯೆ. ಇಲ್ಲಿ ಗ್ರೀಕರ ಭಾಷೆಯಿಂದ ಹಿಡಿದು ಕಾರಿಬೀಸ್ ದ್ವೀಪವಾಸಿಗಳು ಉಪಯೋಗಿಸುವ ಭಾಷೆಯವರೆಗೆ ಅನೇಕ ಸ್ಥೂಲಸೂಕ್ಷ್ಮ ವ್ಯತ್ಯಾಸಗಳಿವೆ.

ಒಬ್ಬ ಲೇಖಕನ ಕೃತಿಗಳ ಸಾಮಾನ್ಯವಾದ ಬೆಲೆಯನ್ನು ತಿಳಿಯಬೇಕಾದರೆ ಅವನು ಯಾವ ವಿಷಯವನ್ನು ಕುರಿತು ಯೋಚಿಸಿದ್ದಾನೆಂಬುದನ್ನಾಗಲಿ, ಅಥವ ಆ ವಿಷಯವನ್ನು ಕುರಿತು ಅವನು ಏನನ್ನು ಹೇಳಿದ್ದಾನೆಂಬುದನ್ನಾಗಲಿ ಸ್ಪಷ್ಟವಾಗಿ ಪೂರ್ಣವಾಗಿ ತಿಳಿಯಬೇಕಾದುದು ಆವಶ್ಯಕವಿಲ್ಲ. ಹಾಗೆ ತಿಳಿಯುವುದು ಬೇಕಾದರೆ ಅವನ ಎಲ್ಲಾ ಗ್ರಂಥಗಳನ್ನೂ ನೋಡಬೇಕಾಗುವುದು. ಒಟ್ಟಿನಲ್ಲಿ ಮುಖ್ಯವಾಗಿ ಅವನು ಹೇಗೆ ಯೋಚಿಸಿದ್ದಾನೆಂಬುದನ್ನು ತಿಳಿದರೆ ಸಾಕು. ಲೇಖಕನ ಮನಸ್ಸಿನ ಸಾಮಾನ್ಯ ಸ್ಥಿತಿಯನ್ನು ಅವನ ಶೈಲಿಯಿಂದ ತಿಳಿಯಬಹುದು. ಲೇಖಕನ ಶೈಲಿಯು

ಅವನ ಎಲ್ಲಾ ಯೋಚನೆಗಳ ಸ್ಪಷ್ಟವಾದ ಬಾಹ್ಯಸ್ವರೂಪ ಆ ಯೋಚನೆಗಳ ವಸ್ತು ಯಾವುದೇ ಇರಲಿ, ಅವುಗಳ ಸ್ವಭಾವ ಏನೇ ಇರಲಿ. ಬಾಹ್ಯಸ್ವರೂಪವು ಮಾತ್ರ ಎಂದಿಗೂ ಬದಲಾಗುವುದಿಲ್ಲ. ಶೈಲಿಯು ಅವನ ಮನಸ್ಸಿನ ವಿಚಾರಗಳನ್ನೆಲ್ಲಾ ಹೊರಕ್ಕೆ ನಾದುವ ಕಣಿಕದಂತೆ. ಯೂಲೆನ್‌ಸ್ಪೀಗಲ್ (Eulenspiegel) ನನ್ನು "ಮುಂದಲ ಹಳ್ಳಿಗೆ ಹೋಗಲು ಎಷ್ಟು ಹೊತ್ತಾಗುತ್ತದೆ" ಎಂದು ಕೇಳಿದಾಗ ಅವನು ಅಸಂಬದ್ಧವಾದ ಉತ್ತರವನ್ನು ಕೊಟ್ಟನು: "ನಡೆದು ನೋಡು" ಎಂದು. ಆ ಮನುಷ್ಯನ ನಡಿಗೆಯಿಂದ ಒಂದು ನಿರ್ದಿಷ್ಟವಾದ ಕಾಲದಲ್ಲಿ ಎಷ್ಟು ದೂರವನ್ನು ನಡೆಯಬಹುದೋ ಅದನ್ನು ತಿಳಿಯಲು ಅವನು ಅಪೇಕ್ಷಿಸಿದನು. ಹಾಗೆಯೇ ಒಬ್ಬ ಲೇಖಕನ ಕೆಲವು ಪುಟಗಳನ್ನು ಓದಿದ ಕೂಡಲೆ ಅವನು "ಎಷ್ಟು ದೂರ ತನ್ನನ್ನು ಕರೆದುಕೊಂಡು ಹೋಗಬಲ್ಲನೆಂಬುದು" ವಾಚಕನಿಗೆ ಚೆನ್ನಾಗಿ ಗೊತ್ತಾಗುತ್ತದೆ.

ಪ್ರತಿಯೊಬ್ಬ ಸಾಮಾನ್ಯ ಮಧ್ಯಮ ತರಗತಿಯ ಲೇಖಕನೂ ತನ್ನ ಸ್ವಾಭಾವಿಕವಾದ ಶೈಲಿಯನ್ನು ಮುಚ್ಚಲು ಪ್ರಯತ್ನಪಡುತ್ತಾನೆ. ಯಾಕೆಂದರೆ ಈ ಸತ್ಯವು ಅವನಿಗೆ ಚೆನ್ನಾಗಿ ಮಂದಟ್ಟಾಗಿರುತ್ತದೆ. ಅವನು ಪ್ರಾರಂಭದಿಂದಲೂ ನಿಷ್ಕಪಟಿಯೂ, ಸರಳವಾದವನೂ ಆಗಿರುವ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಾನೆ. ಆ ಸ್ವಾತಂತ್ರ್ಯವು ಅವನಿಗಿಂತಲೂ ಮಹತ್ತಾದ ಉತ್ತಮವಾದ ಲೇಖಕರಿಗೆ ಮೀಸಲಾಗುತ್ತದೆ. ಆ ಉತ್ತಮರಾದ ಬರಹಗಾರರಿಗೆ ತಮ್ಮ ಯೋಗ್ಯತೆ ತಮಗೆ ಗೊತ್ತಿರುವುದರಿಂದ ತಮ್ಮಲ್ಲಿ ತಮಗೆ ನಂಬಿಕೆ ಚೆನ್ನಾಗಿರುತ್ತದೆ. ನಾನು ಹೇಳುವುದೇನೆಂದರೆ ಈ ತತ್ಕಾಲಿಕ ಬರಹಗಾರರು ತಮಗೆ ತೋರಿದುದನ್ನು ಬರೆಯುವುದಕ್ಕೇ ಅಶಕ್ತರಾಗಿರುತ್ತಾರೆ. ಯಾಕೆಂದರೆ ತಾವು ಹಾಗೆ ಮಾಡಿದರೆ ತಮ್ಮ ಕೃತಿಯು ಬಹು ಸುಲಭವಾಗಿಯೂ ಸರಳವಾಗಿಯೂ ತೋರಬಹುದೆಂದು ಅವರಿಗೆ ಭಯ. ಹಾಗೆ ಸುಲಭವೂ ಸರಳವೂ ಒಂದು ವೇಳೆ ಆದರೂ ಅದರಲ್ಲಿ ಬೆಲೆಯಿಲ್ಲದೆ ಇಲ್ಲ. ಅವರು ನಿಷ್ಕಪಟಿಗಳಾಗಿ ಕೆಲಸ ಮಾಡಿ ತಾವು ಯೋಚಿಸಿರುವುದನ್ನು ಯೋಚಿಸಿರುವಂತೆ ಸ್ವಾಭಾವಿಕವಾಗಿ ಬರೆದರೆ ವಾಚಕರು ಅವುಗಳನ್ನು ಓದಬಹುದು. ಮತ್ತು ಪ್ರಪಂಚದಲ್ಲಿ ಅವುಗಳಿಂದ ತಕ್ಕ ಮಟ್ಟಿಗೆ ಜ್ಞಾನಪ್ರಚಾರವೂ ಆಗಬಹುದು.

ಆದರೆ ಅದರ ಬದಲು ಅವರು ತಮ್ಮ ಯೋಚನೆಯು ವಾಸ್ತವವಾಗಿರುವುದಕ್ಕಿಂತ ಹೆಚ್ಚು ಆಳವಾಗಿ ಹೋಗಿದೆಯೆಂದು ವಾಚಕನನ್ನು ನಂಬಿಸಲು ಪ್ರಯತ್ನಿಸುತ್ತಾರೆ. ತಾವು ಹೇಳಬೇಕಾದುದನ್ನು ಅಸ್ವಾಭಾವಿಕವಾಗಿ ಸುತ್ತಿಕೊಂಡಿರುವ ದೊಡ್ಡ

ದೊಡ್ಡ ವಾಕ್ಯಗಳಲ್ಲಿ ಹೇಳುತ್ತಾರೆ. ಹೊಸ ಹೊಸ ಮಾತುಗಳನ್ನು ಸೃಷ್ಟಿಸಿ ತಮ್ಮ ಅಭಿಪ್ರಾಯವನ್ನು ಮರೆಮಾಡಿ ಅಸ್ಪಷ್ಟವಾಕ್ಯಗಳಲ್ಲಿ ಹೇಳುತ್ತಾರೆ. ತಾವು ಹೇಳಬೇಕಾದುದನ್ನು ಹೇಳುವುದು, ಹೇಳದೆ ಮರೆಮಾಚುವುದು, ಇವೆರಡರ ನಡುವೆ ಅವರು ತೊಳಲಾಡುತ್ತಾರೆ. ಅವರ ಉದ್ದೇಶವು, ಮೇಲೆ ನೋಡಿದ ಕೂಡಲೇ ಕಾಣುವುದಕ್ಕಿಂತ ಎಷ್ಟೋ ಹೆಚ್ಚು ವಿಚಾರಗಳು ತಮ್ಮ ಕೃತಿಗಳಲ್ಲಿ ಇದೆಯೆಂದು ತೋರುವಂತೆ ತಮ್ಮ ಭಾವಗಳಿಗೆ ವೇಷ, ಬಣ್ಣ ಹಾಕುವುದೇ ಆಗಿರುತ್ತದೆ. ಅವರು ತಮ್ಮ ಭಾವಗಳನ್ನು ನಾನಾರ್ಥಗಳುಳ್ಳ ಪರಸ್ಪರ ವಿರುದ್ಧವಾದ ಸಣ್ಣ ಸಣ್ಣ ವಾಕ್ಯಗಳಲ್ಲಿ ಬರೆಯುತ್ತಾರೆ. ಮೇಲೆ ನೋಡಿದರೆ ಅವುಗಳಲ್ಲಿ ವಾಸ್ತವವಾಗಿ ಇರುವುದಕ್ಕಿಂತ ಹೆಚ್ಚು ಅರ್ಥವಿರುವಂತೆ ಕಾಣುತ್ತದೆ. ಇದಕ್ಕೆ ಶೆಲ್ಲಿಂಗ್ (Shelling) ಸ್ವಭಾವಿಕ ವೇದಾಂತದ ಮೇಲೆ ಬರೆದ ಗ್ರಂಥವು ಒಳ್ಳೆಯ ಉದಾಹರಣೆಯಾಗಿದೆ. ಇಂತಹ ಲೇಖಕರು ಅಸಂಖ್ಯಾತಗಳಾದಷ್ಟು ಮಾತುಗಳನ್ನು ಸಹಿಸಲಸಾಧ್ಯವಾದಷ್ಟು ವಿವರವಾಗಿ ಬರೆದು ತಮ್ಮ ಜ್ಞಾನದ ಆಳವನ್ನು ವಾಚಕರಿಗೆ ತೋರಿಸಲು ಎಷ್ಟು ಮಾತುಗಳಾದರೂ ಸಾಲದೆಂಬಂತೆ ತೋರಿಸುತ್ತಾರೆ ಆದರ ಆ ಭಾವಗಳು ಅತ್ಯಲ್ಪವಾದುವಾಗಿ ಇಲ್ಲದಿದ್ದರೂ ಕೇವಲ ಸಾಮಾನ್ಯವಾಗಿ ಇರಬಹುದು ಇದಕ್ಕೆ ಉದಾಹರಣೆಗಳು ಜನಸಾಮಾನ್ಯರಿಗಾಗಿ ಬರೆದ ಫಿಟ್‌ಚೆ (Fichte) ಎಂಬುವನ ಪುಸ್ತಕವಲ್ಲಿಯೂ ಇನ್ನೂ ಸಾವಿರಾರು ಅನಾಮಧೇಯರಿಂದ ವೇದಾಂತದ ಮೂಷರ ಬರವಣಿಗೆಗಳಲ್ಲೂ ದೊರೆಯುತ್ತವೆ. ಅವರು ಯಾವುದೋ ಒಂದು ವಿಧವ ದ ಶೈಲಿಯನ್ನು ಅನುಸರಿಸಿಕೊಂಡು, ಅದೇ ಬಹು ಮಹತ್ವವಾದ ಶಾಸ್ತ್ರೀಯವಾದ ಶೈಲಿಯೆಂದು ಯೋಚಿಸಿಕೊಳ್ಳುತ್ತಾರೆ. ಅವರ ಆ ಶೈಲಿಯಲ್ಲಿ ಭಾವಗಳಿರುವುದಿಲ್ಲ. ವಾಕ್ಯಗಳು ಅತ್ಯಂತ ಉದ್ದವಾಗಿರುತ್ತವೆ. ಅವುಗಳ ಅರ್ಥವನ್ನು ತಿಳಿಯಬೇಕಾದರೆ ವಾಚಕನಿಗೆ ಯಮಯಾತನೆಯಾಗುತ್ತದೆ. ಇದಕ್ಕೆ ಅಸಂಬದ್ಧ ಪ್ರಲಾಪದ ಹೆಗೇಲಿಯನ್ಸ್ (Hegelians) ರೇ ಉದಾಹರಣೆ. ಅಥವಾ ಅವರು ಅತಿಬುದ್ಧಿವಂತಿಕೆಯ ಶೈಲಿಯನ್ನು ಹುಡುಕುವದರಲ್ಲಿ ಹುಚ್ಚರೇ ಆಗಬಹುದು. ಅಥವಾ ಇದೇ ಬಗೆಯದಾದ ಫಲಗಳನುಳ್ಳ ಇನ್ನೂ ಅನೇಕ ಬಗೆಯ ಶೈಲಿಗಳನ್ನು ಸಾಮಾನ್ಯ ಲೇಖಕರು ಅನುಸರಿಸಬಹುದು. ಇಷ್ಟು ಪ್ರಸವವೇದನೆಯಾದಮೇಲೆ ಜನಿಸುವ ಆ ಸಣ್ಣ ಪ್ರಾಣಿ ಜನರ ಕಣ್ಣಿಗೆ ತನ್ನ ನಿಜರೂಪದಲ್ಲಿ ಕಾಣದಿರಲೆಂದು ಅವರು ಇಷ್ಟು ಕಷ್ಟಪಡುತ್ತಾರೆ. ಗ್ರಂಥಕರ್ತೃವಿನ ಅಭಿಪ್ರಾಯವೇನೆಂಬುವನ್ನು ತಿಳಿಯುವುವೇ ಅನೇಕ ಸಲ ಕಷ್ಟವಾಗುತ್ತದೆ. ಅವರು ಅರ್ಥವೂ ಭಾವವೂ ಇಲ್ಲದ ಅನೇಕ ವಾಕ್ಯಗಳನ್ನು ಬರೆಯುತ್ತಾರೆ ಆ ಮಾತುಗಳಲ್ಲಿ ತಮಗೆ ಅರ್ಥ

ತೋರದಿದ್ದರೂ ವಾಚಕರಲ್ಲಿ ಯಾರಿಗಾದರೂ ಅದರಲ್ಲಿ ಏನಾದರೂ ಅರ್ಥ ತೋರ ಬಹುದೆಂಬುದೇ ಅವರ ಆಸೆ.

ಇದರ ಮೂಲದಲ್ಲಿರುವುದೆಲ್ಲಾ ಏನು ? ಬರಿಯ ಮಾತುಗಳನ್ನೂ ಪದಗಳನ್ನೂ ಭಾವಗಳೆಂದು ಮಾರುವುದಕ್ಕೆ ಕೊನೆಯಿಲ್ಲದ ಪ್ರಯತ್ನಗಳು ; ವಿಚಿತ್ರವಾದ ಬರವಣಿಗೆ, ಪದಸಮೂಹ, ವಾಕ್ಯಸರಣಿ (ಹೊಸರೀತಿಯ ಮಾತು ಅಥವಾ ಹಳೆಯ ಮಾತನ್ನೇ ಹೊಸ ಅರ್ಥದಲ್ಲಿ) ಇವುಗಳಿಂದ ತನ್ನ ವಸ್ತುವನ್ನು ಮಾರುವುದಕ್ಕೆ ಯಾವಾಗಲೂ ದಾರಿಯನ್ನು ಹುಡುಕುತ್ತಿರುವುದು; ತನಗೆ ಬುದ್ಧಿ ಇಲ್ಲವೆಂದು ಚೆನ್ನಾಗಿ ತಿಳಿದಿದ್ದರೂ ಇದೆಯೆಂದು ಜನರಿಗೆ ಮಂಕುಬೂದಿ ಎರಚಲು ನಟಿಸುವುದು.

ಈ ಉದ್ದೇಶದಿಂದ ಲೇಖಕರು ಒಂದಾದಮೇಲೆ ಒಂದರಂತೆ ಬಗೆಬಗೆಯ ಪದ್ಧತಿಗಳನ್ನು, ಬುದ್ಧಿಯ ಮೊಕವಾಡಗಳಂತೆ ಹಾಕಿಕೊಳ್ಳುವುದನ್ನು ನೋಡುವುದು ವಿನೋದಕರವಾದುದು. ಈ ಮೊಕವಾಡದಲ್ಲಿ ಜೀವವಿಲ್ಲವೆಂದು ತಿಳಿಯುವವರೆಗೆ, ಅನುಭವವಿಲ್ಲದ ಕೆಲವು ವಾಚಕರು ಸ್ವಲ್ಪಕಾಲ ಅದರಿಂದ ಮೋಸಹೋಗಬಹುದು. ಅನಂತರ ಅದು ಹಾಸ್ಯಾಸ್ಪದವಾಗುವುದು. ಆಗ ಕೂಡಲೇ ಲೇಖಕನು ಮತ್ತೊಂದು ಬಗೆಯ ಶೈಲಿಯನ್ನು ಅನುಸರಿಸುತ್ತಾನೆ. ಅಂತಹ ಲೇಖಕನು ಒಂದು ಸಲ ಕುಡುಕನಂತೆ ತಲೆತಿರುಕ ಶೈಲಿಯನ್ನು ಉಪಯೋಗಿಸುತ್ತಾನೆ. ಮುಂದಲ ಪುಟದಲ್ಲಿಯೇ ಆಡಂಬರದ ಅತಿವಿಸ್ತಾರವಾದ ಪ್ರೌಢವಾದ ಸಣ್ಣ ಸಣ್ಣ ವಾಕ್ಯಗಳನ್ನು ಬರೆಯುತ್ತಾನೆ. ಅಸ್ಪಷ್ಟತೆಯ ಮೊಕವಾಡ ಬಹಳ ಕಾಲ ನಿಲ್ಲುತ್ತದೆ. ಆದರೆ ಇದು ಜರ್ಮನಿಯಲ್ಲಿ ಮಾತ್ರ. ಇಲ್ಲಿ ಫಿಟ್‌ಚೆ (Fichte) ಯಿಂದ ಪ್ರಾರಂಭವಾಗಿ, ಶೆಲ್ಲಿಂಗ್ (Shelling) ನಿಂದ ಕ್ರಮಪಟ್ಟು ಹೀಗಲ್ (Hegel)ನಲ್ಲಿ ಪರಮಾವಧಿಗೆ ಬಂದಿದೆ. ಇದರಿಂದ ಲೇಖಕನು ತನ್ನ ಉದ್ದೇಶವನ್ನು ಸಾಧಿಸಿಕೊಂಡಿದ್ದಾನೆ.

ಆದರೆ ಯಾರಿಗೂ ಅರ್ಥವಾಗದಂತೆ ಬರಯುವುದಕ್ಕಿಂತ ಹೆಚ್ಚು ಸುಲಭವಾದುದು ಯಾವುದೂ ಇಲ್ಲ. ಹಾಗೆಯೇ ಎಲ್ಲರಿಗೂ ತಿಳಿಯುವಂತೆ ಗಹನವಾದ ವಿಚಾರಗಳನ್ನು ಸರಿಯಾದ ಸುಲಭವಾದ ರೀತಿಯಲ್ಲಿ ಬರೆಯುವುದು ಬಹಳ ಕಷ್ಟ. ಗ್ರಂಥಕರ್ತನಿಗೆ ನಿಜವಾಗಿಯೂ ಸ್ವಲ್ಪವಾದರೂ ಜ್ಞಾನವೂ ಬುದ್ಧಿಯೂ ಇದ್ದರೆ ನಾನು ಹೇಳಿರುವ ತಂತ್ರಗಳೂ ಚಾಕಚಕ್ಯಗಳೂ ಅವನಿಗೆ ಅನವಶ್ಯಕ. ಯಾಕೆಂದರೆ ಬುದ್ಧಿಯು ತಾನು ಸ್ವಾಭಾವಿಕವಾಗಿ ಇರುವಂತೆ ಇತರರಿಗೆ ತೋರಿಸಿಕೊಳ್ಳಲು ಅವಕಾಶ ಕೊಡುತ್ತದೆ "ಒಳ್ಳೆಯ ಶೈಲಿಯ ಮೂಲವು ಒಳ್ಳೆಯ ಬುದ್ಧಿ" ಎಂಬ ಹೊರೇಸ್ (Horace) ನ ಮಾತನ್ನು ಸ್ಥಿರಪಡಿಸುತ್ತದೆ.

ಆದರೆ ಮೇಲೆ ನಾನು ಹೇಳಿರುವ ಮಧ್ಯಮ ತರಗತಿಯಲ್ಲಿ ಲೇಖಕರು, ಚಿನ್ನವನ್ನು ಮಾಡಲು ಅನೇಕ ಪ್ರಯೋಗಗಳನ್ನು ಮಾಡುವವರಂತೆ. ಆದರೆ ಚಿನ್ನಕ್ಕೆ ಪ್ರತಿಯಾದ ಪದಾರ್ಥ ಯಾವುದೂ ಇಲ್ಲ. ಅದರ ಬದಲು ಲೇಖಕನು, ತನ್ನಲ್ಲಿ ಇಲ್ಲದ ಬುದ್ಧಿಯು ಇದೆಯೆಂದು ತೋರಿಸಿಕೊಳ್ಳುವ ಅಪಾಯದಿಂದ ದೂರವಾಗಿರಬೇಕು. ಯಾಕೆಂದರೆ ಅವನು ಅತಿಪ್ರೌಢಿಮೆಯನ್ನು ತೋರಿಸಲು ಪ್ರಾರಂಭಿಸಿದ ಕೂಡಲೇ, ಅವನಿಗೆ ಬುದ್ಧಿಯು ಸ್ವಲ್ಪವೇ ಇದೆಯೆಂದು ವಾಚಕನಿಗೆ ಸಂದೇಹ ವುಂಟಾಗುತ್ತದೆ. ಯಾಕೆಂದರೆ ಮನುಷ್ಯನು ಯಾವುದು ತನ್ನಲ್ಲಿ ಇದೆ ಎಂದು ನಟಿಸುತ್ತಾನೋ ಅದು ಸ್ವಾಭಾವಿಕವಾಗಿ ಅವನಲ್ಲಿ ಬಹಳ ಕಡಿಮೆಯಾಗಿರುತ್ತದೆ.

ಆದುದರಿಂದಲೇ ಲೇಖಕನು "ನಿಷ್ಕಪಟಿ—ಸಾಚಾ" ಎಂದರೆ ಅವನಿಗೆ ಗೌರವವನ್ನು ಕೊಟ್ಟಂತೆ ಆಯಿತು. ಅಂದರೆ ತಾನು ಇರುವಂತೆ ತೋರಿಸಿಕೊಳ್ಳಲು, ತನ್ನ ನಿಜರೂಪದಲ್ಲಿ ಕಾಣಲು ಅವನು ಹಿಂದೆಗೆಯಬೇಕಾದುದಿಲ್ಲವೆಂದು ಅರ್ಥ. ಸಾಧಾರಣವಾಗಿ, ಸರಳವಾಗಿದ್ದರೆ ಮನೋಹರವಾಗಿರುತ್ತದೆ. ಸ್ವಾಭಾವಿಕವಾಗಿಲ್ಲದಿದ್ದರೆ ಯಾವುದೂ ಅಸಹ್ಯವಾಗುತ್ತದೆ. ವಾಸ್ತವವಾಗಿ ಪ್ರತಿಯೊಬ್ಬ ದೊಡ್ಡ ಗ್ರಂಥಕರ್ತನೂ ತನ್ನ ಭಾವಗಳನ್ನು ಸಾಧ್ಯವಾದಷ್ಟು ಶುದ್ಧವಾಗಿ ಸರಳವಾಗಿ ಸ್ಪಷ್ಟವಾಗಿ ಸಂಕ್ಷೇಪವಾಗಿ ಹೇಳಲು ಪ್ರಯತ್ನಿಸುತ್ತಾನೆ. "ಸರಳತೆಯು ಸತ್ಯದ ಒಂದು ಗುರುತು" ಎಂದು ಯಾವಾಗಲೂ ಗಣಿಸಲ್ಪಟ್ಟಿದೆ. ಅದೇ ಮೇಧಾವಿಗಳ ಲಕ್ಷಣವೂ ಆಗಿದೆ. ಯಾವ ಭಾವಗಳನ್ನು ಹೇಳುತ್ತೇವೆಯೋ ಆ ಭಾವಗಳಿಂದ ಶೈಲಿಗೆ ಸೌಂದರ್ಯವು ಬರುತ್ತದೆ. ಆದರ ತಾವು ಮೇಧಾವಿಗಳೆಂದು ನಟಿಸುವವರು ಶೈಲಿಯಿಂದಲೇ ಭಾವಕ್ಕೆ ಸೌಂದರ್ಯ ಬರುವುದೆಂದು ಊಹಿಸುತ್ತಾರೆ. ಶೈಲಿಯು ಆಲೋಚನೆ, ಬುದ್ಧಿಗಳ ಛಾಯೆಯೇ ಹೊರತು ಬೇರೆ ಅಲ್ಲ. ಅಸ್ಪಷ್ಟವಾದ ಅಥವಾ ಕೆಟ್ಟ ಶೈಲಿಯೆಂದರೆ ಮಂಕಾದ ಮತ್ತು ಮಂದವಾದ ಬುದ್ಧಿ ಎಂದು ಅರ್ಥ.

ಆದುದರಿಂದ ಲೇಖಕನ ಮೊದಲನೆಯ ನಿಯಮ ತಾನು ಹೇಳಬೇಕಾದುದು ಏನಾದರೂ ಇರಬೇಕು. ಇದು ಮೊದಲನೆಯ ನಿಯಮವಲ್ಲ. ಆವಶ್ಯಕವಾದುದೆಲ್ಲಾ ಇಷ್ಟೇ ಎಂಬುದಾಗಿ ಹೇಳಬಹುದು. ಆದರೆ ಅದರಲ್ಲಿ ಎಷ್ಟು ಅರ್ಥವಿದೆ! ಈ ನಿಯಮದ ಔದಾಸೀನ್ಯವೇ ನಮ್ಮ ದೇಶದ ವೇದಾಂತಗ್ರಂಥಗಳಲ್ಲೂ ಮುಖ್ಯವಾಗಿ ಫಿಟ್ಚೆಯಕಾಲದಿಂದ (Fichte) ಕುಂದಾಗಿದೆ ಈ ಬರಹಗಾರರೆಲ್ಲಾ ತಾವು ಹೇಳತಕ್ಕುದು, ಏನೋ ಇದೆ ಎಂದು ನಟಿಸುತ್ತಾರೆ. ಆದರೆ ಅವರು ಹೇಳತಕ್ಕ

ದುದು ಏನೂ ಇರುವುದಿಲ್ಲ. ಈ ಬಗೆಯ ಬರವಣಿಗೆಯು ಮೊದಲು ವಿಶ್ವವಿದ್ಯಾಲಯಗಳ ತರ್ಕ ತತ್ವಜ್ಞಾನಿಗಳಿಂದ ಪ್ರಾರಂಭವಾಗಿ ಈಚೆಗೆ ಎಲ್ಲೆಲ್ಲೂ, ಈ ಕಾಲದ ಮೊದಲನೆ ದರ್ಜೆಯ ಸಾಹಿತಿಗಳಲ್ಲೂ ಪ್ರಚಾರವಾಗಿದೆ. ಒಂದು ವಾಕ್ಯದಲ್ಲಿ ಎರಡು ಅಥವ ಮೂರು ಅರ್ಥಗಳಿರುವ ಅಸ್ಪಷ್ಟವಾದ ಮತ್ತು ತಿಣಕಾಡಿದ ಶೈಲಿಗೂ, ವಿಸ್ತಾರವಾಗಿ ಸುತ್ತಿಕೊಂಡು ಹೇಳುವ ಅರ್ಥವಿಲ್ಲದ ಪದಸಮೂಹಗಳ ಶೈಲಿಗೂ, ಕೊನೆಯವರೆಗೆ ಸ್ವಲ್ಪವೂ ಭಾವಗಳೂ ಯೋಚನೆಗಳೂ ಇಲ್ಲದೆ ಓದುವವನಿಗೆ ಗಾಬರಿಯಾಗುವಂತೆ ಗಾಳಿಯ ಯಂತ್ರದಂತೆ, ಯೋಚನೆಯ ದಾರಿದ್ರ್ಯವನ್ನು ಮುಚ್ಚುವ ಶೈಲಿಗೂ, ಎಷ್ಟು ಗಂಟೆಗಳ ಕಾಲ ವಾಚಕನು ಓದಿದರೂ ಒಂದು ಸ್ಪಷ್ಟವಾದ ಭಾವವೂ ಅರ್ಥವೂ ಆಗದಿರುವ ಶೈಲಿಗೂ, ತಾವು ಹೇಳಬೇಕಾದುದು ಏನೋ ಇವೆಯೆಂದು ಲೇಖಕರು ನಟಿಸುವುದೇ ಮೂಲಕಾರಣ. ಆದರೆ ಪಾಪ ಜನರು ಒಳ್ಳೆಯ ಸ್ವಭಾವದವರು. ಲೇಖಕನು ಏನು ಹೇಳುತ್ತಾನೆಂಬುದರ ಕಡೆ ಗಮನಿಸದೆ, ಅನೇಕ ಗಂಟೆಗಳ ಕಾಲ ಆ ಪದಸಮೂಹಗಳನ್ನು ಓದುವ ಅಭ್ಯಾಸವನ್ನು ಅವರು ಮಾಡಿಕೊಂಡಿದ್ದಾರೆ. ಎಲ್ಲಾ ಸರಿಯಾಗಿದೆ ಎಂದೇ ಅವರ ಭಾವ ಲೇಖಕನು ಏನೋ ಬರೆಯಬೇಕು ಎನ್ನುವ ಒಂದೇ ಉದ್ದೇಶದಿಂದಲೇ ಬರೆಯುತ್ತಿರುವನೆಂಬುದು ಅವರಿಗೆ ಹೊಳೆಯುವುದಿಲ್ಲ.

ಅದರ ಬದಲು ಭಾವಗಳನ್ನು ತುಂಬಿಕೊಂಡಿರುವ ಲೇಖಕನು ವಾಚಕರ ನಂಬಿಕೆಯನ್ನು ಮೊದಲೇ ಸಂಪಾದಿಸುತ್ತಾನೆ ಅವನು ಬರೆಯುವುದು ಏನನ್ನೋ ಹೇಳುವುದಕ್ಕೆ ಎಂದು ವಾಚಕನಿಗೆ ಗೊತ್ತಾಗುತ್ತದೆ. ಆದುದರಿಂದ ಬುದ್ಧಿವಂತನಾದ ವಾಚಕನಿಗೆ ಅವನನ್ನು ಎಚ್ಚರಿಕೆಯಿಂದ ಮನಸಿಟ್ಟು ಅನುಸರಿಸುವ ಸಹನೆಯುಂಟಾಗುತ್ತದೆ. ಅಂತಹ ಗ್ರಂಥಕರ್ತನು ತಾನು ನಿಜವಾಗಿಯೂ ಹೇಳಬೇಕಾದ ವಿಷಯವಿರುವುದರಿಂದ ಅತ್ಯಂತ ಸುಲಭವಾದ ಮತ್ತು ಸರಳವಾದ ಶೈಲಿಯಲ್ಲಿ ಹೇಳುವುದನ್ನು ತಪ್ಪುವುದಿಲ್ಲ. ಯಾಕೆಂದರೆ ತನ್ನಲ್ಲಿ ಇರುವ ಭಾವಗಳನ್ನು ವಾಚಕನಲ್ಲಿ ಉಂಟುಮಾಡುವುದರ ಹೊರತು ಅವನಿಗೆ ಬೇರೆ ಉದ್ದೇಶವಿಲ್ಲ. ಅವನ ಯೋಚನೆಗಳೂ, ಭಾವಗಳೂ, ಅಭಿಪ್ರಾಯಗಳೂ ಯಾವಾಗಲೂ ದೀಪದ ಬೆಳಕಿಗೆ ಬರಲು ಸಿದ್ಧವಾಗಿವೆ. ಅವನು ಹೇಳುವುದು ಒಳ್ಳೆಯದಿರಲಿ ಕೆಟ್ಟದ್ದು ಇರಲಿ, ಏನನ್ನೋ ಹೇಳುತ್ತಾನೆ. ಆದರ ಹಿಂದೆ ಹೇಳಿದ ಬರಹಗಾರರು " ಸುಮ್ಮನೆ ಹೆಚ್ಚಾಗಿ ಮಾತನಾಡುತ್ತಾರೆ ಏನನ್ನೂ ಹೇಳುವುದಿಲ್ಲ" ಎಂದು ಒಂದೇ ಮಾತಿನಲ್ಲಿ ಹೇಳಬಹುದು.

ಸಾಧಾರಣವಾದ ಮಧ್ಯಮ ದರ್ಜೆಯ ಲೇಖಕರು ಯಾವಾಗಲೂ ಒಂದು ಸಿದ್ಧಾಂತವನ್ನು ಮಾಡುವುದಿಲ್ಲ. ಇದಕ್ಕೆ ಮುಖ್ಯಕಾರಣ, ಸಾಧ್ಯವಾದರೆ, ಅವಶ್ಯಕವಾದರೆ ತಪ್ಪಿಸಿಕೊಂಡು ಹೋಗಲು ಕಿಡುಗಂಡಿಯನ್ನು ಬಿಟ್ಟುಕೊಂಡಿರುವುದೇ ಆದುದರಿಂದ ಅವರು ಸ್ವಲ್ಪಗೂಢವಾದ ಅಸ್ಪಷ್ಟವಾದ ಶೈಲಿಯನ್ನೇ ಅನುಸರಿಸುತ್ತಾರೆ. ಆದರೆ ನಿಜವಾದ ಮೇಧಾವಿಗಳು ಸ್ಪಷ್ಟವಾದ ಶೈಲಿಯನ್ನು ಉಪಯೋಗಿಸುತ್ತಾರೆ. ಏಕೆಂದರೆ ಸ್ಪಷ್ಟವಾದ ಶೈಲಿಯಿಂದ ವಿಷಯಗಳು ಕಾರ್ಯಕಾರಿ ಪ್ರಪಂಚದ ಆವರಣಕ್ಕೆ ಬರುತ್ತವೆ. ಹೀಗಾಗುವುದೇ ಎಲ್ಲಾ ಸ್ಪಷ್ಟತೆಗೂ ಮೂಲ

ಲೇಖಕನು ಈ ಅಸ್ಪಷ್ಟವಾದ ಶೈಲಿಯನ್ನು ಆರಿಸುವುದಕ್ಕೆ ಅನೇಕ ಉದಾಹರಣೆಗಳಿವೆ. ಸ್ಪಷ್ಟವಾದ ಸಿದ್ಧಾಂತಗಳನ್ನು ಹೇಳಲು ಹೆದರುವ, ಯೋಗ್ಯತೆಯಿಲ್ಲದ ಗ್ರಂಥಕರ್ತರಿಗೆ ಈ ಬಗೆಯ ಶೈಲಿಯು ತುಂಬ ಸಹಾಯಕವಾಗಿದೆ ಬದುಕಿನಲ್ಲಿ ಕೆಟ್ಟುದನ್ನೂ, ಸಾಹಿತ್ಯದಲ್ಲಿ ಅಯೋಗ್ಯವಾದುದನ್ನೂ ಅನುಕರಿಸುವ ಮನೋಭಾವದ ಫಲವೇ ಈ ಅಸ್ಪಷ್ಟ ಶೈಲಿ. ಈ ಸ್ವಭಾವ ಎಷ್ಟು ಬೇಗ ಹರಡುತ್ತದೋ ಅದರಿಂದಲೇ ಅದನ್ನು ಸಿದ್ಧಾಂತಗೊಳಿಸಬಹುದು. ಇಂಗ್ಲಿಷಿನವರು ಬರವಣಿಗೆಯಲ್ಲೂ ಕೆಲಸದಲ್ಲೂ ವಿವೇಕಜ್ಞಾನವನ್ನು ಮೊದಲು ಮಾಡುತ್ತಾರೆ ಆದರೆ ಈ ಯೋಗ್ಯತೆ ಜರ್ಮನಿಯ ವಿಚಾರದಲ್ಲಿ ಸುಳ್ಳಾದಷ್ಟು ಇನ್ನಾವ ರಾಷ್ಟ್ರದ ವಿಚಾರದಲ್ಲಿಯೂ ಸುಳ್ಳಾಗಿಲ್ಲ ಇದರ ಫಲವಾಗಿ ಸಾಹಿತ್ಯದಿಂದ ಅನೇಕ ಪದಗಳು ಮರೆಯಾಗಿ, ಅವುಗಳಿಗೆ ವಿರೋಧವಾದ ಅರ್ಥವುಳ್ಳ ಪದಗಳು ಆ ಸ್ಥಳಗಳಲ್ಲಿ ಬಳಕೆಯಾಗುತ್ತಿವೆ ಇದು ಹಾಸ್ಯಾಸ್ಪದವಾಗಿರುವುದರಿಂದ ಇದನ್ನು ಹೇಳಲೇಬೇಕಾಯಿತು.

ಈ ಸಾಮಾನ್ಯ ಮಧ್ಯಮ ತರಗತಿಯ ಬರಹಗಾರರು ತಾವು ಗ್ರಂಥರಚನೆ ಮಾಡುತ್ತಿರುವ ಕಾಲದಲ್ಲಿ ಅರ್ಧಮಾತ್ರ ಎಚ್ಚರವಾಗಿರುವುದೇ ಅವರ ಮನಸ್ಸಿನ ಮಂಕಿಗೂ ಅವರು ಸೃಷ್ಟಿಸುವ ಗ್ರಂಥದಲ್ಲಿ ವಾಚಕನ ಬೇಸರಿಕೆಗೂ ಕಾರಣವಾಗಿದೆ. ಅವರು ಅರ್ಧಮಾತ್ರ ಎಚ್ಚರವಾಗಿರುವರೆಂದು ನಾನು ಹೇಳುವುದಕ್ಕೆ ಕಾರಣವೇನೆಂದರೆ, ತಾವು ಬಳಸುತ್ತಿರುವ ಮಾತುಗಳ ಅರ್ಥವನ್ನೇ ತಿಳಿದಿರುವುದಿಲ್ಲ. ಸಿದ್ಧವಾಗಿರುವ ಮಾತುಗಳನ್ನು ತೆಗೆದುಕೊಂಡು ಅವರು ಅವುಗಳನ್ನು ಕಂಠಪಾಠಮಾಡುತ್ತಾರೆ. ಆದುದರಿಂದ ಅವರು ಬರೆಯುವಾಗ ತಮಗೆ ತಿಳಿಯದ ಪದಗಳನ್ನು ಮಾತ್ರವೇ ಅಲ್ಲ ಪದಸಮೂಹಗಳನ್ನೇ ಒಟ್ಟೊಟ್ಟಾಗಿ ಉಪಯೋಗಿಸುತ್ತಾರೆ. ಅವರ ಲೇಖನಗಳಲ್ಲಿ ಸ್ಪಷ್ಟವಾಗಿ ವಿವರಿತವಾದ ಆಲೋಚನೆಗಳು ಇಲ್ಲದಿರುವುದಕ್ಕೆ

ಇದೇ ಕಾರಣ. ತಮ್ಮ ಬರವಣಿಗೆಗೆ ಮುದ್ರೆಯೊತ್ತುವ ಅಚ್ಚು ಅವರಲ್ಲಿ ಇಲ್ಲ. ಸ್ವಂತವಾದ ಆಲೋಚನೆಗಳೇನೆಂಬುದನ್ನೇ ಅವರು ಕಾಣರು. ಆದರೆ ಅದರ ಬದಲು ನಮಗೆ ಕಾಣುವುದೇನು? ಅಸ್ಪಷ್ಟವಾದ, ಸರಿಯಾದ ಅರ್ಥವಿಲ್ಲದ ಪದಗಳ ಮತ್ತು ವಾಕ್ಯಗಳ ಸಮೂಹ, ಅನೇಕ ಕಾಲದಿಂದ ಉಪಯೋಗವಾಗಿ ಪ್ರಚಾರದಲ್ಲಿರುವ ಸಾಧಾರಣವಾದ ಮಾತುಗಳು; ಇವುಗಳ ಫಲವಾಗಿ ಅವರ ಲೇಖನವು, ಬಹಳ ಹಳೆಯ ಕಾಲದ ಅಕ್ಷರದಲ್ಲಿ ಅಚ್ಚುಮಾಡಿದ ಪುಟದಂತೆ ಮಂಜಾಗಿ ಮಸಕು ಮಸಕಾಗಿ ಇರುತ್ತದೆ.

ಬುದ್ಧಿವಂತನಾದ ಗ್ರಂಥಕರ್ತನು ತಾನು ಲೇಖನಿಯನ್ನು ಹಿಡಿದಾಗ ನಿಜವಾಗಿಯೂ ನಮ್ಮೊಡನೆ ಮಾತನಾಡುತ್ತಾನೆ. ಅವನು ನಮ್ಮಲ್ಲಿ ಕುತೂಹಲವನ್ನು ಹೆಚ್ಚಿಸಿ ನಮ್ಮೊಂದಿಗೆ ಸಂಭಾಷಿಸಲು ಶಕ್ತನಾಗುತ್ತಾನೆ. ಅಂತಹ ಲೇಖಕನು, ಪದಗಳ ಅರ್ಥವನ್ನು ಸರಿಯಾಗಿ ತಿಳಿದು, ಬೇರೆ ಬೇರೆ ಉದ್ದೇಶಗಳಿಗಾಗಿ ಎಲ್ಲೆಲ್ಲಿ ಬೇಕೋ ಅಲ್ಲಲ್ಲಿ ಅವುಗಳನ್ನು ಬಳಸುತ್ತಾನೆ. ಮೊದಲು ಹೇಳಿದ ಮಧ್ಯಮ ತರಗತಿಯ ಬರಹಗಾರನಿಗೂ ಇವನಿಗೂ ಇರುವ ವ್ಯತ್ಯಾಸ ಬಣ್ಣಹಾಕಿದ ಚಿತ್ರಕ್ಕೂ ಬಣ್ಣದ ತಗಡಿನಿಂದ ಮಾಡಿದ ಚಿತ್ರಕ್ಕೂ ಇರುವಷ್ಟೇ ಆಗಿದೆ. (ಬಣ್ಣಹಾಕಿದ ಚಿತ್ರದಲ್ಲಿ ಪ್ರತಿಯೊಂದು ಪದಕ್ಕೂ ಕುಂಚದ ಪ್ರತಿಯೊಂದು ಚಲನೆಗೂ ಬೇರೆ ಬೇರೆ ಅರ್ಥವಿದೆ. ಎರಡನೆಯದರಲ್ಲಿ ಎಲ್ಲಾ ಯಂತ್ರದಿಂದ ಆಗಿದೆ. ಸಂಗೀತದಲ್ಲೂ ಇದೇ ವ್ಯತ್ಯಾಸವನ್ನು ಕಾಣಬಹುದು. ಲಿಚ್ಟೆನ್‌ಬರ್ಗನು (Lichtenberg) ಗ್ಯಾರಿಕ್‌ನ ಆತ್ಮವು ಅವನ ಎಲ್ಲಾ ಅವಯುವಗಳಲ್ಲೂ ಇದ್ದಂತೆ ಕಾಣುತ್ತಿದ್ದಿತೆಂದು ಹೇಳುತ್ತಾನೆ. ಹಾಗೆಯೇ ಮೇಧಾವಿಗಳ ಎಲ್ಲಾ ಕೆಲಸಗಳಲ್ಲೂ ಬುದ್ಧಿಯು ಸರ್ವಾಂತರ್ಯಾಮಿಯಾಗಿರುತ್ತದೆ.

ಮಧ್ಯಮ ತರಗತಿಯ ಗ್ರಂಥಕರ್ತರಲ್ಲಿ ಸ್ಪಷ್ಟವಾಗಿ ತೋರುವ ಬೇಸರಿಕೆಯ ವಿಚಾರವನ್ನು ನಾನು ಪ್ರಸ್ತಾಪಿಸಿದ್ದೇನೆ. ಈ ಸಂದರ್ಭದಲ್ಲಿ ಬೇಸರಿಕೆ ಎಂಬುದು ಸಾಧಾರಣವಾಗಿ ಎರಡು ತರಹೆಯವುಗಳಾಗಿವೆ; ವಿಚಾರಕ್ಕೆ ಸಂಬಂಧಪಟ್ಟುದು; ಭಾಷೆಗೆ ಸಂಬಂಧಪಟ್ಟುದು; ಎಂದು ಹೇಳಬಹುದು. ಬೇಸರಿಕೆ, ಶೈಲಿಗೆ ಸಂಬಂಧಪಟ್ಟುದಾದರೆ ಅದನ್ನು ಶೈಲಿಯ ಬೇಸರಿಕೆ ಎನ್ನಬಹುದು. ಅಂದರೆ ಲೇಖಕನಲ್ಲಿ ಹೇಳಲು ಯಾವ ಸ್ಪಷ್ಟವಾದ ಮತ್ತು ನಿಷ್ಕೃಷ್ಟವಾದ ಆಲೋಚನೆಯೂ ಇಲ್ಲವೆಂದು ಅರ್ಥ. ಯಾಕೆಂದರೆ, ಲೇಖಕನಲ್ಲಿ, ಹೇಳಲು ಸ್ಪಷ್ಟವಾದ ಭಾವವಾಗಲಿ ಜ್ಞಾನವಾಗಲಿ ಇದ್ದರೆ ಅದನ್ನು ಇತರರಿಗೆ ತಿಳಿಸಲು ಅವನು ತನ್ನ ಎಲ್ಲಾ ಶಕ್ತಿಗಳನ್ನೂ

ಉಪಯೋಗಿಸುತ್ತಾನೆ. ಅಂದರೆ ಅವನು ಮುಂದಿಡುವ ಅಭಿಪ್ರಾಯಗಳು ಎಲ್ಲಾ ಕಡೆಯೂ ಸ್ಪಷ್ಟವಾಗಿರುತ್ತವೆ. ಅದರ ಫಲವಾಗಿ ಅವನ ಬರವಣಿಗೆಯಲ್ಲಿ ಅಸ್ಪಷ್ಟತೆ, ಅರ್ಥವಿಲ್ಲದಿರುವುದು, ಅವ್ಯವಸ್ಥೆ ಇವುಗಳೊಂದೂ ಇರುವುದಿಲ್ಲ. ಆದುದರಿಂದ ಆ ಕೃತಿಯಲ್ಲಿ ಬೇಸರಿಕೆಯುಂಟಾಗುವುದಿಲ್ಲ. ಅಂತಹ ಸಂದರ್ಭದಲ್ಲಿ ಲೇಖಕನ ಅಭಿಪ್ರಾಯಗಳು ತಪ್ಪೇ ಆದರೂ ಆ ತಪ್ಪು ವ್ಯವಸ್ಥಿತವಾಗಿ ಚೆನ್ನಾಗಿ ಮಥಿತವಾಗಿರುವುದರಿಂದ, ಹೊರಗಿನ ತೋರಿಕೆಗೆ ಸರಿಯಾಗಿಯೇ ಕಾಣುತ್ತದೆ. ಆದುದರಿಂದ ಅದಕ್ಕೆ ಯಾವಾಗಲೂ ಸ್ವಲ್ಪ ಬೆಲೆಯುಂಟು ಆದರೆ ಆ ಕಾರಣದಿಂದಲೇ ಶೈಲಿಯ ತಪ್ಪಿನಿಂದ ಬೇಸರಿಕೆಯುಂಟಾಗುವ ಕೃತಿಗಳಿಗೆ ಯಾವಾಗಲೂ ಸ್ವಲ್ಪವೂ ಬೆಲೆಯಿರುವುದಿಲ್ಲ.

ಎರಡನೆಯ ವಿಧದ ಬೇಸರಿಕೆ ವಾಚಕನಿಗೂ ಕರ್ತೃವಿಗೂ ಸಮಾನಾಗಿ ಸೇರಿದುದು. ಪ್ರತಿಪಾದಿತವಾದ ವಿಷಯದಲ್ಲಿ ತನಗೆ ಉತ್ಸಾಹವಿಲ್ಲದಿರುವುದರಿಂದ ವಾಚಕನಿಗೆ ಕೃತಿಯಲ್ಲಿ ಬೇಸರಬರಬಹುದು. ಅಂದರೆ ವಾಚಕನ ಬುದ್ಧಿಗೆ ಪರಿಮಿತಿಯುಂಟೆಂದು ಅದರಿಂದ ಸ್ಪಷ್ಟವಾಗುವುದು. ಆದುದರಿಂದ ಅತ್ಯುತ್ತಮ ಕೃತಿಯೂ ಕೂಡ ವಿಷಯದ ದೃಷ್ಟಿಯಿಂದ ಒಬ್ಬರಿಗಲ್ಲದಿದ್ದರೆ ಒಬ್ಬರಿಗೆ ಬೇಸರಿಕೆಯನ್ನುಂಟು ಮಾಡಬಹುದು. ಹಾಗೆಯೇ ಕೆಲವು ವಾಚಕರಿಗೆ ಎಂತಹ ಹೀನವಾದ ಕೃತಿಯೂ, ವಿಷಯಕ್ಕಾಗಿಯಾಗಲಿ, ಗ್ರಂಥಕರ್ತನಲ್ಲಿರುವ ಕುತೂಹಲದಿಂದಲಾಗಲಿ ಮನೋರಂಜಕವಾಗಿ ತೋರಬಹುದು.

ಆಲೋಚನೆ ಮಾಡುವಾಗ ಪ್ರತಿಯೊಬ್ಬ ಮನುಷ್ಯನೂ ತಾನೇ ಒಬ್ಬ ದೊಡ್ಡ ಮೇಧಾವಿಯಂತ ಯೋಚಿಸುವುದು ಸರಿ. ಆದರ ಗ್ರಂಥಕರ್ತೃಗಳು ಎಲ್ಲರೂ ಉಪಯೋಗಿಸುವ ಭಾಷೆಯನ್ನೇ ಉಪಯೋಗಿಸುವುದು ಒಳ್ಳೆಯದೆಂಬುದನ್ನು ತಿಳಿಯಬೇಕು ಗ್ರಂಥಕರ್ತೃಗಳು ಅಸಾಧಾರಣವಾದ ವಿಷಯಗಳನ್ನು ಹೇಳಲು ಸಾಧಾರಣವಾದ ಮಾತುಗಳನ್ನೇ ಬಳಸಬೇಕು. ಆದರೆ ಅವರು ಮಾಡುತ್ತಿರುವುದು ಇದಕ್ಕೆ ವಿಪರೀತವಾಗಿದೆ. ಅವರು ಅಲ್ಪವಾದ ಆಲೋಚನೆಗಳನ್ನು ದೊಡ್ಡ ದೊಡ್ಡ ಪದಗಳಲ್ಲಿ ಮುಚ್ಚುವುದನ್ನೂ, ಸಾಧಾರಣವಾದ, ಅಸ್ವಾಭಾವಿಕವಾದ, ಬೇಗ ಅರ್ಥವಾಗದ, ಬಳಕೆಯಲ್ಲಿಲ್ಲದ ಮಾತುಗಳ ಹೊದಿಕೆಯನ್ನು ನೇಯುವುದನ್ನೂ ನಾವು ಕಾಣುತ್ತೇವೆ. ಅವರ ವಾಕ್ಯಗಳು ಪದೇ ಪದೇ ವಾಗಾಡಂಬರದ ಮರಗಾಲುಗಳ ಮೇಲೆ ಹೋಗುತ್ತವೆ. ಆಡಂಬರದಲ್ಲಿ ಅವರಿಗೆ ಆನಂದ •ಹೆಚ್ಚು. ಅವರು ಮಹತ್ತಾದ ಉಬ್ಬಿದ ನಟನೆಯ ಗರಡಿ ವರಸೆಯಲ್ಲಿ ಬರೆಯುತ್ತಾರೆ ಅವರು

ಕಿಂಗ್ ಹೆನ್ರಿ IV ನಲ್ಲಿ ಬರುವ ಏನ್‌ಷೆಂಟ್ ಪಿಸ್ಟಲ್‌ನ ಪಾತ್ರದಂತೆ ಕಾಣುತ್ತಾರೆ. ಒಂದುಸಲ ಅವನ ಸ್ನೇಹಿತನಾದ ಫಾಲ್‌ಸ್ಟಾಫನು, “ಈ ಪ್ರಪಂಚದ ಮನುಷ್ಯನಂತೆ ಮಾತನಾಡ” ಎಂದು ಅವನಿಗೆ ಹೇಳಬೇಕಾಯಿತು.

ಶೈಲಿಯಲ್ಲಿ ಆಡಂಬರವನ್ನು ತೋರಿಸುವುದು ಸಮಾಜದಲ್ಲಿ ದೊಡ್ಡಸ್ತಿಕೆ ಪ್ರತಿಷ್ಠೆಗಳನ್ನು ತೋರಿಸಿದಂತೆ. ಅದನ್ನು ಸಹಿಸುವುದು ಹೇಗೆ ಕಷ್ಟವೋ ಇದನ್ನು ಸಹಿಸುವುದೂ ಹಾಗೆಯೇ ಕಷ್ಟ. ಸಾಮಾನ್ಯ ಜೀವನದಲ್ಲಿ ಅತಿ ಥಳಕನ್ನೂ ಉಪಚಾರವನ್ನೂ ವಿವೇಕವಿಲ್ಲದವರು ಹೇಗೆ ತೋರಿಸುತ್ತಾರೆಯೋ, ಹಾಗೆಯೇ ಸಾಹಿತ್ಯದಲ್ಲಿ ಮಂದಬುದ್ಧಿಯುಳ್ಳವರು ಮಾತ್ರ ಆಡಂಬರದ ಶೈಲಿಯನ್ನು ಉಪಯೋಗಿಸುತ್ತಾರೆ.

ಸಾಮಾನ್ಯಜನರಿಂದ ಬೇರೆಯಾಗಿ ಕಾಣಬೇಕೆಂದು ಆಡಂಬರದ ಉಡುಪನ್ನು ಧರಿಸುವ ಮನುಷ್ಯನಿಗೆ, ಆಡಂಬರದ ಶೈಲಿಯ ಲೇಖನವನ್ನೂ ಹೋಲಿಸಬಹುದು. ನಿಜವಾದ ದೊಡ್ಡ ಮನುಷ್ಯನು ಯಾವ ಉಡುಪಿನಲ್ಲಿದ್ದರೂ ಸಾಮಾನ್ಯರೊಂದಿಗೆ ಸೇರುವುದೇ ಇಲ್ಲ. ಎಲ್ಲದರಲ್ಲೂ ಥಳಕು ಒಂದು ಬಗೆಯ ಅಚ್ಚುಕಟ್ಟು ಇವುಗಳಿಂದ ಮಧ್ಯಮತರಗತಿಯ ಮನುಷ್ಯನನ್ನು ಕಂಡುಹಿಡಿಯಬಹುದು. ಅದೇ ರೀತಿ ಸಾಧಾರಣವಾದ ಲೇಖಕನು ತನ್ನ ಶೈಲಿಯಿಂದಲೇ ಪತ್ತೆಯಾಗುತ್ತಾನೆ.

ಲೇಖಕನು ಮಾತನಾಡುವ ಶೈಲಿಯಲ್ಲಿ ಬರೆದರೆ ತಪ್ಪುಹಾದಿಯನ್ನು ಹಿಡಿಯುತ್ತಾನೆ. ಬಹುಕಾಲದಿಂದ ಬಂದಿರುವ ಕಾವ್ಯಶೈಲಿಯ ಛಾಯೆ ಅಥವ ಸಂಬಂಧವಿಲ್ಲದುದು ಶೈಲಿಯೇ ಅಲ್ಲ. ಮಾತನಾಡುವಂತೆ ಬರಯುವುದು, ಬರೆಯುವಂತೆ ಮಾತನಾಡಿದಷ್ಟೆ ಅಪರಾಧ. ಬರೆಯುವಂತೆ ಮಾತನಾಡಿದರೆ ಮಾತೆಲ್ಲಾ ಪುಸ್ತಕ ಪಾಠದಂತೆ ತೋರುತ್ತದೆ. ಅದು ಇತರರಿಗೆ ಅರ್ಥವಾಗುವುದೂ ಕಷ್ಟವಾಗುತ್ತದೆ.

ಅಸ್ಪಷ್ಟವಾದ ಮತ್ತು ಸಂದೇಹಾಸ್ಪದವಾದ ಮಾತಿನ ಕ್ರಮವು ಯಾವಾಗಲೂ ಎಲ್ಲೂ ಕೆಟ್ಟ ಚಿನ್ಹೆ. ಶೇಕಡ ತೊಂಬತ್ತೊಂಬತ್ತರಲ್ಲಿ, ಇದು ಆಲೋಚನೆಯ ಮೂಲದ ಅಸ್ಪಷ್ಟತೆಯೇ ಆಗಿದೆ. ಅಂದರೆ ಮತ್ತೆ ಸ್ವಾಭಾವಿಕವಾಗಿ ಆಲೋಚನೆಯಲ್ಲಿಯೇ ಕುಂದಿದೆ ಎಂದು ಅರ್ಥ. ಸರಿಯಾದ ಆಲೋಚನೆಯು ಮನಸ್ಸಿನಲ್ಲಿ ದೃಢಪಟ್ಟಕೂಡಲೇ, ಅದು ವ್ಯಕ್ತವಾಗಲು ಮಾತುಗಳನ್ನು ಹುಡುಕುತ್ತದೆ. ಆ ಮಾತುಗಳು ಅದಕ್ಕೆ ಸಿಕ್ಕುವುದು ತಡವಾಗುವುದಿಲ್ಲ. ಯಾಕೆಂದರೆ ಸ್ಪಷ್ಟವಾದ ಆಲೋಚನೆಗಳಿಗೆ ಅವಕ್ಕೆ ಬೇಕಾದ ಮಾತುಗಳು ತತ್‌ಕ್ಷಣ ದೊರೆಯುತ್ತವೆ. ಮನುಷ್ಯನು ಸ್ಪಷ್ಟವಾಗಿ ಆಲೋಚಿಸಲು ಅಶಕ್ತನಾದರ ಆ ಯೋಚನೆ

ಗಳನ್ನು ಸ್ಪಷ್ಟವಾಗಿ ಎಲ್ಲರಿಗೂ ತಿಳಿಯುವಂತೆ ಹೇಳಲು ಅವನು ಅಶಕ್ತನಾಗಿಯೇ ಉಳಿಯುತ್ತಾನೆ. ಕ್ಲಿಷ್ಟವಾದ, ಸುರಳಿ ಸುತ್ತಿಕೊಂಡಿರುವ ಶ್ಲೇಷಾರ್ಥಗಳುಳ್ಳ ವಾಕ್ಯ ಗಳನ್ನು ಬರೆಯುವ ಲೇಖಕರಿಗೆ ತಾವು ಹೇಳಬೇಕಾಗಿರುವುದೇನೆಂಬುದೇ ಸ್ಪಷ್ಟವಾಗಿ ತಿಳಿದಿರುವುದಿಲ್ಲ. ಆಲೋಚನೆ ಮತ್ತೆ ಭಾವವಾಗಿ ರೂಪವನ್ನು ಹೊಂದಲು ಅವರ ಮನಸ್ಸು ತೊಳಲಾಡುತ್ತಿರುವುದರ ಸೂಚನೆ ಮಾತ್ರ ಅವರಿಗೆ ತೋರುತ್ತದೆ. ತಮ್ಮಲ್ಲಿ, ಹೇಳಲು ಏನೂ ಇಲ್ಲವೆಂಬುದನ್ನು ತಮ್ಮಿಂದಲೂ ಇತರರಿಂದಲೂ ಅನೇಕ ವೇಳೆ ಮುಚ್ಚುವುದೇ ಅವರ ಉದ್ದೇಶವಾಗಿರುತ್ತದೆ. ಒಬ್ಬ ಮನುಷ್ಯ ತಾನು ಹೇಳ ಬೇಕಾದುದು ಏನಾದರೂ ಇದ್ದರೆ ಅವನು ಯಾವ ಮಾರ್ಗವನ್ನು ಅನುಸರಿಸುತ್ತಾನೆ? ಅಸ್ಪಷ್ಟವಾದ ಮಾರ್ಗವೇ ಸ್ಪಷ್ಟವಾದ ಮಾರ್ಗವೇ? ಮೇಧಾವಿಯು ಹೇಳುವ ಮಾತುಗಳು ಸುಲಭವಾಗಿ ತಿಳಿಯುತ್ತವೆ. ಆದರೆ ಮೇಧಾವಿಯಲ್ಲದವನು ಹೇಳುವ ಮಾತು ತಿಳಿಯುವುದೇ ಇಲ್ಲ.

ಗ್ರಂಥಕರ್ತೃವು ಸಂದಿಗ್ಧಾರ್ಥದ ಪದಗಳನ್ನೂ ಶ್ಲೇಷಗಳನ್ನೂ ಬಿಡಬೇಕು. ಒಂದು ವಿಷಯವನ್ನು ಹೇಳಲು ತನಗೆ ಇಷ್ಟವಿದೆಯೋ ಇಲ್ಲವೇ ಎಂಬುದು ಲೇಖಕ ನಿಗೆ ತಿಳಿದಿರಬೇಕು. ಶೈಲಿಯಲ್ಲಿ ನಿಶ್ಚಯತೆಯಿಲ್ಲದಿರುವುದರಿಂದ ಅನೇಕ ಗ್ರಂಥ ಕರ್ತರು ಅಲ್ಪರಾಗುತ್ತಾರೆ. ಅಲ್ಲದೆ ಅನುಚಿತವಾದ ವಿಚಾರಗಳನ್ನು ಹೇಳುವುದ ರಿಂದಲೂ ಲೇಖಕರು ಅಲ್ಪರಾಗುತ್ತಾರೆ.

ಅತಿಶಯೋಕ್ತಿಯು ಯಾವಾಗಲೂ ನಾವು ಉದ್ದೇಶಿಸಿರುವುದಕ್ಕೆ ವಿರೋಧ ವಾದ ಫಲವನ್ನೇ ಕೊಡುತ್ತದೆ ಹಾಗೆಯೇ ಮಾತುಗಳು ಒಂದು ಎಲ್ಲೆಯವರೆಗೆ ಮಾತ್ರ ನಮ್ಮ ಆಲೋಚನೆಗಳನ್ನು ಸ್ಪಷ್ಟಪಡಿಸುತ್ತವೆ ಎಲ್ಲೆಮೀರಿ ಪದಗಳನ್ನು ತುಂಬಿದರೆ ಭಾವವು ಹೆಚ್ಚುಹೆಚ್ಚು ಅಸ್ಪಷ್ಟವಾಗುತ್ತದೆ ಆ ಎಲ್ಲೆ ಎಲ್ಲಿದೆ ಎಂಬು ದನ್ನು ಕಂಡುಹಿಡಿದುಕೊಳ್ಳುವುದೇ ಶೈಲಿಯ ಸಮಸ್ಯೆ ಮತ್ತು ವಿಮರ್ಶೆಯ ಶಕ್ತಿ. ಯಾಕೆಂದರೆ ಒಂದು ಮಾತನ್ನು ಹೆಚ್ಚಾಗಿ ಹಾಕಿದರೂ ಉದ್ದೇಶಕ್ಕೆ ಭಂಗವುಂಟಾಗು ತ್ತದೆ.* ಆದರೆ ನಾವು ನೋಡಿರುವಂತೆ ಅನೇಕರು ತಮ್ಮ ಯೋಚನೆಗಳ ದಾರಿ ದ್ರ್ಯವನ್ನು ಪದಗಳ ಪ್ರವಾಹದಲ್ಲಿ ಮುಚ್ಚಲು ಪ್ರಯತ್ನಿಸುತ್ತಾರೆ.

ಆದುದರಿಂದ ಹೆಚ್ಚು ಮಾತುಗಳನ್ನೂ, ಓದುವುದಕ್ಕೆ ಅರ್ಹವಲ್ಲದ ಪದ ಸಮೂಹಗಳನ್ನೂ ಒಂದಕ್ಕೊಂದಕ್ಕೆ ಪೋಣಿಸುವುದನ್ನೂ ಬಿಡಿ. ಗ್ರಂಥಕರ್ತನು

*The objective is the enemy of substantive-voltaire.

ವಾಚಕನ ಕಾಲದ, ಸಹನೆಯ, ಲಕ್ಷ್ಯದ ಉಪಯೋಗವನ್ನು ಆದಷ್ಟು ಕಡಿಮೆ ಮಾಡಿಕೊಳ್ಳಬೇಕು. ಆಗ ವಾಚಕನಿಗೆ, ಲೇಖಕನು ವ್ಯಾಸಂಗಮಾಡಲು ಅರ್ಹವಾದುದನು ಮಾತ್ರ ಬರೆಯುವನೆಂದೂ, ಆದಕ್ಕೆ ಉಪಯೋಗವಾದ ಕಾಲದಿಂದ ತನಗೆ ಪ್ರತಿಫಲವುಂಟೆಂದೂ ನಂಬಿಕೆಯಾಗುವುದು. ಗ್ರಂಥಕರ್ತೃವು, ಹೇಳಲು ಅರ್ಹವಲ್ಲದ ಕೆಲವು ವಿಷಯಗಳನ್ನು ಹೇಳುವುದಕ್ಕಿಂತ ಹೇಳಲು ಅರ್ಹವಾದ ಕೆಲವು ವಿಷಯಗಳನ್ನು ಹೇಳದೆ ಬಿಡುವುದು ಒಳ್ಳೆಯದು. ಹಿಸಿಯಾಡ್ (Hesiod) ಹೇಳಿರುವ "ಅರ್ಧ ಪೂರ್ತಿಗಿಂತ ಉತ್ತಮ" ಎಂಬುದರ ಅಭಿಪ್ರಾಯವೂ ಇದೆಯೆ. ಆದುದರಿಂದ, ಸಾಧ್ಯವಾದರೆ ಲೇಖಕನು ಮುಖ್ಯ ಸಾರವನ್ನು ಮಾತ್ರ ಹೇಳಬೇಕು; ದಾರಿತೋರಿಸುವ ಯೋಚನೆಗಳನ್ನು ಮಾತ್ರ; ವಾಚಕನಿಗೆ ಹೊಳೆಯದಿರತಕ್ಕ ಯೋಚನೆಗಳನ್ನು ಮಾತ್ರ; ಸ್ವಲ್ಪವನ್ನು ಹೇಳಲು ಬಹಳ ಮಾತುಗಳನ್ನು ಬಳಸುವುದು ಯಾವಾಗಲೂ ಸಾಮಾನ್ಯತೆಯ ಲಕ್ಷಣ. ಕೆಲವೇ ಮಾತುಗಳಲ್ಲಿ ಹೆಚ್ಚು ಭಾವಗಳನ್ನು ಲೇಖಿಸುವುದು ಮೇಧಾವಿಯ ಗುಣ

ಸತ್ಯವು ಬೆತ್ತಲೆಯಾಗಿಯೇ ಬಹಳ ಚೆನ್ನಾಗಿ ಕಾಣುತ್ತದೆ ಅದನ್ನು ಹೇಳುವುದು ಎಷ್ಟು ಸುಲಭವೋ ಅದರಿಂದ ಮನಸ್ಸಿನ ಮೇಲೆ ಆಗುವ ಪರಿಣಾಮವು ಅದಕ್ಕೆ ಅನುಸಾರವಾಗಿದೆ. ಇದಕ್ಕೆ ಕಾರಣ ಸತ್ಯವು ವಾಚಕನ ಹೃದಯವನ್ನು ಪೂರ್ಣವಾಗಿ ಸ್ವಾಧೀನಪಡಿಸಿಕೊಂಡು ಅವನಿಗೆ ಬೇರೆ ಯೋಚನೆಯನ್ನು ಮಾಡಲು ಅವಕಾಶವನ್ನೇ ಕೊಡದಿರುವುದಾಗಿದೆ. ಮತ್ತು ವಾಚಕನಿಗೆ "ತಾನು ಓದುತ್ತಿರುವುದೆಲ್ಲಾ ವಿಷಯಕ್ಕೆ ಸಂಬಂಧಪಟ್ಟುದು; ಇಲ್ಲಿ ನನ್ನನ್ನು ಪದಗಳ ಇಂದ್ರಜಾಲದಲ್ಲಿ ಸಿಲುಕಿಸಿ ಮೋಸಪಡಿಸುವವರು ಯಾರೂ ಇಲ್ಲ" ಎಂಬ ಭಾವನೆ ಇರುವುದೂ ಸ್ವಲ್ಪಮಟ್ಟಿಗೆ ಕಾರಣವಾಗುತ್ತದೆ. ಉದಾಹರಣೆಗಾಗಿ ಮನುಷ್ಯಜೀವನದ ಅಸಾರತೆಯ ಮೇಲೆ ಜಾಬ್ (Job) ಎಂಬುವವನ ಪ್ರಸಂಗಕ್ಕಿಂತ ಮತ್ತಾವುದು ತಾನೆ ಹೆಚ್ಚು ಪರಿಣಾಮಕಾರಕವಾಗಬಲ್ಲದು: "ಸ್ತ್ರೀಯಿಂದ ಜನಿಸಿದ ಮಾನವನು ಬದುಕುವುದು ಅತ್ಯಲ್ಪಕಾಲ. ಅದೂ ದುಃಖಪೂರ್ಣವಾದುದು. ಅವನು ಬೆಳೆಯುತ್ತಾನೆ. ಹೂವಿನಂತೆ ಕತ್ತರಿಸಲ್ಪಡುತ್ತಾನೆ. ನೆರಳಿನಂತೆ ಹಾರಿಹೋಗುತ್ತಾನೆ. ಒಂದು ಸಮನಾಗಿ ಶಾಶ್ವತವಾಗಿ ಎಲ್ಲೂ ನಿಲ್ಲುವುದಿಲ್ಲ."

ಈ ಕಾರಣದಿಂದಲೇ ಗಯಟೆಯ ಸ್ವಾಭಾವಿಕವಾದ ಕಾವ್ಯವು ಷಿಲ್ಲರನ ಶಬ್ದಾಡಂಬರಗಳಿಗಿಂತ ಎಷ್ಟೋ ಪಾಲು ಉತ್ತಮವಾದುದು. ಅನೇಕ ಜನಪದ ಗೀತ

ಗಳು ಅಷ್ಟು ಪರಿಣಾಮಕಾರಿಯಾಗುವುದು ಈ ಕಾರಣದಿಂದಲೇ. ಶಿಲ್ಪಿ ಕಲೆಯಲ್ಲಿ ಹೇಗೆ ಅತಿ ಅಲಂಕಾರವನ್ನು ಬಿಡಬೇಕೋ ಹಾಗೆಯೇ ಸಾಹಿತ್ಯದಲ್ಲೂ ಶಬ್ದಾಲಂಕಾರ, ಅನವಶ್ಯಕವಾದ ಶಬ್ದ ಬಾಹುಳ್ಯ, ಒಟ್ಟಿನಲ್ಲಿ "ಹೆಚ್ಚುಮಾತು," ಇವುಗಳನ್ನು ಬಿಡಬೇಕು. ಒಂದು ಮಾತಿನಲ್ಲಿ ಹೇಳಬೇಕಾದರೆ ಲೇಖಕನು ಶುದ್ಧವಾದ ಶೈಲಿಗಾಗಿ ಹೋರಾಡಬೇಕು, ಹೆಚ್ಚಾದ ಒಂದೇ ಒಂದು ಮಾತನ್ನು ಕೂಡ ಬಿಡದಿದ್ದರೆ ಹಾನಿಯಾಗುತ್ತದೆ. ಸರಳತೆ ಮತ್ತು ಸ್ವಾಭಾವಿಕತೆಯ ನಿಯಮವು ಎಲ್ಲಾ ಕಲೆಗಳಿಗೂ ಒಂದೇ ಸಮನಾಗಿ ಅನ್ವಯಿಸುತ್ತದೆ. ಯಾಕೆಂದರೆ, ಒಂದೇ ಕಡೆ ಸರಳವೂ ಗಂಭೀರವೂ ಇರುವುದು ಪೂರ್ಣವಾಗಿ ಸಾಧ್ಯ.

ಯಾವುದು ಹೇಳುವುದಕ್ಕೆ ಅರ್ಹವಾದುದೋ ಅದನ್ನು ಮಾತ್ರ ಹೇಳಿ. ವಾಚಕನು ತಾನೇ ತಿಳಿದುಕೊಳ್ಳಬಹುದಾದ, ಬೇಸರಿಕೆಯನ್ನು ಹುಟ್ಟಿಸುವ ವಿವರಗಳನ್ನೆಲ್ಲಾ ಬಿಡುವುದು ಶೈಲಿಯಲ್ಲಿ ಯಾವಾಗಲೂ ನಿಜವಾದ ಮಿತಿ. ಈ ಮಿತಿಗೆ, ಆವಶ್ಯಕವಾದುದು ಯಾವುದು, ಅಧಿಕವಾದುದು ಯಾವುದು ಎಂಬ ವಿವೇಚನಾಶಕ್ತಿಯಿರಬೇಕು. ಸ್ಪಷ್ಟತೆಗೂ, ವ್ಯಾಕರಣನಿಯಮಕ್ಕೂ ಭಂಗಬರುವಂತಿದ್ದರೆ, ಲೇಖಕನು ಎಂದಿಗೂ ಮಿತವಾಗಿರಕೂಡದು. 'ಮಿತದ' ಉದ್ದೇಶದಿಂದ ವಾಕ್ಯದ ಅರ್ಥವನ್ನೇ ತಿರುಚುವುದು ಅಥವ ಮಾತುಗಳ ಭಾವನೆಯ ಬಲವನ್ನು ಕಡಿಮೆಮಾಡುವುದು ಲೇಖಕನ ವಿವೇಚನಾಶಕ್ತಿಯ ಅಭಾವವನ್ನು ವ್ಯಕ್ತಪಡಿಸುತ್ತದೆ. ಆಧುನಿಕರ 'ಮಿತ'ದ ಪ್ರಯತ್ನವು ಇದೆಯೆ. ಈ 'ಮಿತ'ಕ್ಕಾಗಿ ಉಪಯುಕ್ತವಾದ ಪದಗಳನ್ನೂ ಅನೇಕ ವೇಳೆ ವ್ಯಾಕರಣ ವಿವೇಕವನ್ನೂ ಆಧುನಿಕರು ಬಲಿಕೊಡುತ್ತಾರೆ. ಇಂತಹ ಲೇಖಕರು ಒಂದು ಮಾತನ್ನು ಕಡಿಮೆಯಾಗಿಯೋ, ಅಥವ ಒಂದು ಕ್ರಿಯೆ ಅಥವ ಗುಣವಾಚಕವು ಅನೇಕ ವಾಕ್ಯಗಳಿಗೆ ಅನ್ವಯಿಸುವಂತೆಯೋ ಮಾಡಿ ವಾಚಕನನ್ನು ಕತ್ತಲೆಯಲ್ಲಿ ದಾರಿಕಾಣದೆ ಅಲೆಸುತ್ತಾರೆ. ಅಷ್ಟೇ ಅಲ್ಲ. ಅವರು ಇನ್ನೂ ಅನೇಕ ತಪ್ಪು ದಾರಿಗಳಲ್ಲಿ ಮಾತುಗಳನ್ನು ಕಡಮೆ ಮಾಡಿ, ಅದೇ ಸಂಕ್ಷೇಪವಾದ ಶೈಲಿಯೆಂಬ ತಪ್ಪು ಜ್ಞಾನವನ್ನು ಅಭ್ಯಾಸ ಮಾಡಿಕೊಳ್ಳುತ್ತಾರೆ. ಪೂರ್ಣವಾಕ್ಯದ ಮೇಲೆ ಬೆಳಕನ್ನು ಬೀರುವ ಯಾವುದೋ ಪದವನ್ನೇ ಬಿಟ್ಟು, ವಾಕ್ಯವನ್ನೇ ಒಗಟಿಯಾಗಿ ಮಾಡಿಬಿಡುತ್ತಾರೆ. ವಾಚಕನು ಆ ಒಗಟಿಯ ಸುತ್ತ ತಿರುಗಿ ತಿರುಗಿ ಅದನ್ನು ಒಡೆಯಲು ಪ್ರಯತ್ನಿಸುತ್ತಾನೆ.

ಭಾವಗಳ ಯೋಗ್ಯತೆ ಮತ್ತು ಭಾವಗಳ ಆಧಿಕ್ಯ (ಸಮೃದ್ಧಿ) ಇವುಗಳಿಂದ ಮಾತ್ರವೇ ಶೈಲಿಯು ಸಂಕ್ಷೇಪವೂ ಶುದ್ಧವೂ ಅರ್ಥಪೂರ್ಣವೂ ಆಗುತ್ತದೆ. ಮತ್ತು

ವುದರಿಂದಲೂ ಅಲ್ಲ. ಒಂದೆರಡು ಮಾತು ಕಡಮೆಯಾಗುವುದರಿಂದ ಅಲ್ಲ. ಲೇಖಕನ ಅಭಿಪ್ರಾಯಗಳು, ಭಾವಪೂರ್ಣವೂ, ಕಾಂತಿಯುಕ್ತವೂ ಇತರರಿಗೆ ತಿಳಿಸಲು ಅರ್ಹವಾದುದೂ ಆಗಿದ್ದರೆ ಅವನ್ನು ವ್ಯಕ್ತಪಡಿಸುವ ಮಾತುಗಳೂ ದಾರಿಯೂ ಅವನಿಗೆ ತಿಳಿದೇ ತಿಳಿಯುತ್ತದೆ; ಮತ್ತು ಆ ದಾರಿಯು ವ್ಯಾಕರಣ ಮತ್ತು ಶೈಲಿಯ ದೃಷ್ಟಿಯಿಂದಲೂ ಶುದ್ಧವಾಗಿಯೇ ಇರುತ್ತದೆ. ಆ ವಾಕ್ಯಗಳು ಸಂಕುಚಿತವಾಗಿಯೂ ಅರ್ಥರಹಿತವಾಗಿಯೂ ಅಲ್ಪವಾಗಿಯೂ ಯಾರಿಗೂ ತೋರುವುದಿಲ್ಲ. ವಾಕ್ಯಸರಣಿಯು ಎಲ್ಲಾ ಕಡೆಯೂ ಸೂಕ್ಷ್ಮವೂ ಅರ್ಥಪೂರ್ಣವೂ ಆಗಿರುತ್ತದೆ. ಭಾವಗಳು ಸ್ಪಷ್ಟವಾಗಿ ವ್ಯಕ್ತವಾಗುವುವಲ್ಲದೆ ತಾವೇ ತಾವಾಗಿ ಗಂಭೀರವಾಗಿ ಮನೋಹರವಾಗಿ ಚಲಿಸಲು ಅವಕಾಶವಾಗುತ್ತವೆ.

ಆದುದರಿಂದ ಮಾತುಗಳನ್ನೂ ವಾಕ್ಯಸರಣಿಗಳನ್ನೂ ಸಂಕ್ಷೇಪಮಾಡಿಕೊಳ್ಳುವುದರ ಬದಲು ಲೇಖಕರು ತಮ್ಮ ಭಾವಗಳನ್ನೇ ವಿಶಾಲ ಮಾಡಿಕೊಳ್ಳಲಿ. ಮನುಷ್ಯನಿಗೆ ರೋಗ ಬಂದು ಶರೀರವು ಕೃಶವಾಗಿ ಬಟ್ಟೆಗಳೆಲ್ಲಾ ಬಹಳ ಸಡಿಲವಾದರೆ, ಬಟ್ಟೆಗಳನ್ನು ದೇಹಕ್ಕೆ ಸರಿಪಡಿಸಿಕೊಳ್ಳುವುದು, ಅವುಗಳನ್ನು ಕತ್ತರಿಸಿ ಕಡಮೆ ಮಾಡುವುದರಿಂದಲ್ಲ. ಅದರ ಬದಲು ದೇಹವು ಮೊದಲಿನ ಆರೋಗ್ಯಸ್ಥಿತಿಗೆ ಬರುವಂತೆ ಮಾಡುವುದರಿಂದ.

ಇಲ್ಲಿ ನಾನು ಮತ್ತೊಂದು ವಿಷಯವನ್ನು ಹೇಳಬೇಕಾಗಿದೆ. ನಮ್ಮ ಪ್ರಾಚೀನಭಾಷೆಗಳನ್ನು ನಿರ್ಲಕ್ಷಿಸುವುದರಿಂದ ಸಾಹಿತ್ಯದಲ್ಲಿ ಉಂಟಾಗಿರುವ ಅವನತಿಯೇ ಅದು. ತನ್ನ ಭಾವಗಳು ತನಗೆ ತಿಳಿದರೆ ಸಾಕು ವಾಚಕನನ್ನು ಕಟ್ಟಿಕೊಂಡು ನನಗೇನು ಎಂದು ಯೋಚಿಸುವ ಲೇಖಕನು ಈ ತಪ್ಪನ್ನು ಮಾಡುತ್ತಾನೆ. ಆಗ ವಾಚಕನು ತನಗೆ ತಿಳಿದಮಟ್ಟಿಗೆ ಅದರ ತಿರುಳನ್ನು ಗ್ರಹಿಸಬೇಕಾಗುತ್ತದೆ. ಇದು ಲೇಖಕನು ತನ್ನಲ್ಲಿ ತಾನು ಸಂಭಾಷಣೆಯನ್ನು ನಡೆಸುತ್ತಿರುವಂತೆ. ಆದರೆ ಅವನು ನಡೆಸಬೇಕಾದ ಸಂಭಾಷಣೆ ಇತರರೊಂದಿಗೆ ಇರಬೇಕು. ಅದರಲ್ಲೂ ತನ್ನ ಭಾವಗಳನ್ನು ಅವನು ಅತ್ಯಂತ ಸ್ಪಷ್ಟವಾಗಿ ಪ್ರಕಟಿಸಬೇಕು. ಏಕೆಂದರೆ ಎದುರಾಳಿಯ ಪ್ರಶ್ನೆಗಳು ಅವನಿಗೆ ಕೇಳಿರುವುದಿಲ್ಲ.

ಈ ಕಾರಣದಿಂದಲೇ ಶೈಲಿಯು ಲೇಖಕನೊಬ್ಬನಿಗೇ ಸೇರಿದ ಶೈಲಿಯಾಗಿರಕೂಡದು. ತನ್ನ ಭಾವಗಳನ್ನು ಬರೆದಾಗ ಲೇಖಕನು ಏನನ್ನು ಯೋಚಿಸುತ್ತಿದ್ದನೋ ಅದನ್ನು ವಾಚಕನು ಯೋಚಿಸಲು ಬಲಾತ್ಕರಿಸುವಂತೆ ಅವನ ಭಾವಗಳೆಲ್ಲಾ

ಸ್ಪಷ್ಟವಾಗಿರಬೇಕು. ಈ ಫಲವು ದೊರೆಯಬೇಕಾದರೆ, ಇದರಲ್ಲೂ ಒಂದು ವಿಧವಾದ ಗುರುತ್ವಾಕರ್ಷಣ ಶಕ್ತಿಯಿರುವುದೆಂದೂ, ಭಾವಗಳು ಮೆದುಳಿನಿಂದ ಕಾಗದಕ್ಕೆ ಬರುವಷ್ಟು ಸುಲಭವಾಗಿ ಕಾಗದದಿಂದ ಮೆದುಳಿಗೆ ಪ್ರವೇಶಿಸುವುದಿಲ್ಲವೆಂದೂ ಈ ಎರಡನೆಯ ವ್ಯಾಪಾರದಲ್ಲಿ ತನ್ನಿಂದ ಸಾಧ್ಯವಾದಷ್ಟು ಸಹಾಯವನ್ನು ವಾಚಕನಿಗೆ ತಾನು ಮಾಡಬೇಕೆಂಬುದನ್ನೂ ಲೇಖಕನು ಯಾವಾಗಲೂ ಮನಸ್ಸಿನಲ್ಲಿ ಇಟ್ಟಿರಬೇಕು. ಲೇಖಕನು ಹೀಗೆ ಮಾಡಿದರೆ ಅವನ ಮಾತುಗಳಿಗೆ ಗೋಡೆಯ ಮೇಲೆ ಬರೆದ ತೈಲಚಿತ್ರದಂತೆ ಸ್ಪಷ್ಟವಾದ ಫಲವುಂಟಾಗುತ್ತದೆ. ಹಾಗಲ್ಲದಿದ್ದರೆ, ಶೈಲಿಯು ಗೋಡೆಯ ಮೇಲಿನ ಚುಕ್ಕೆಗಳಿಗಿಂತ ಹೆಚ್ಚು ಸ್ಪಷ್ಟವಾಗುವುದಿಲ್ಲ. ಮತ್ತು ಆ ಚುಕ್ಕೆಗಳು, ಯಾರ ಮನಸ್ಸಿನಲ್ಲಿ ಆ ವಿಧವಾದ ಕ[illegible]ಸ್ಫುರಿಸ್ರೋ ಅವರಿಗೆ ಮಾತ್ರ ಚಿತ್ರದಂತೆ ಕಂಡು ಉಳಿದವರಿಗೆ ಬರಿಯ ಚಿಕ್ಕಿಗಳಂತೆಯೇ ಕಾಣುತ್ತವೆ. ಈ ವ್ಯತ್ಯಾಸವು ಒಟ್ಟಿನಲ್ಲಿ ಸಾಹಿತ್ಯಮಾರ್ಗಕ್ಕೇ ಅನ್ವಯಿಸುತ್ತದೆ. ಆದರೆ ಅನೇಕ ವೇಳೆ ಪೃಥಕ್ಕಾದ ಉದಾಹರಣೆಗಳಲ್ಲೂ ಇದು ಸ್ಪಷ್ಟಪಡುತ್ತದೆ. ಉದಾಹರಣೆಗಾಗಿ ನೆನ್ನೆ ಮೊನ್ನೆ ಪ್ರಕಟವಾದ ಗ್ರಂಥದಲ್ಲಿ ಈ ಕೆಳಗಿನ ವಾಕ್ಯವು ನನ್ನ ಕಣ್ಣಿಗೆ ಬಿದ್ದಿತು. "ಈಗಾಗಲೇ ಇರುವ ಗ್ರಂಥಗಳ ಸಂಖ್ಯೆಯನ್ನು ಹೆಚ್ಚಿಸಬೇಕೆಂದು ನಾನು ಈ ಗ್ರಂಥವನ್ನು ಬರೆದಿಲ್ಲ." ಅಂದರೆ ಲೇಖಕನು ಏನು ಹೇಳಬೇಕೆಂದು ಹೊರಟನೋ ಅದರ ವಿರುದ್ಧವಾದುದನ್ನೇ ಹೇಳಿದಂತಾಯಿತು. ಇದೂ ವ್ಯರ್ಥವಾದ ಹರಟೆ.

ಅಲಕ್ಷ್ಯದಿಂದ ಯಾರು ಬರೆಯುತ್ತಾರೆಯೋ ಅವರು ಪ್ರಾರಂಭದಲ್ಲೇ ತಮ್ಮ ಯೋಚನೆಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುವುದಿಲ್ಲವೆಂದು ತಾವೇ ಒಪ್ಪಿಕೊಂಡ ಹಾಗೆ ಆಯಿತು. ಯಾಕೆಂದರೆ ಗ್ರಂಥಕರ್ತೃವಿಗೆ ತನ್ನ ಭಾವಗಳ ಸತ್ಯವೂ ಸಾರವೂ ಚೆನ್ನಾಗಿ ಮನಂಪಟ್ಟಾದಾಗ ಮಾತ್ರ, ಅದಕ್ಕೆ ಬೇಕಾದ ವೀರ್ಯವತ್ತಾದ ಚೆಲುವಾದ ಋಜುವಾದ ಸ್ಪಷ್ಟವಾದ ಶೈಲಿಗಾಗಿ ಶಾಶ್ವತವಾದ ಪ್ರಯತ್ನ ಮಾಡುವ ಉತ್ಸಾಹ ಅವನಿಗೆ ಉಂಟಾಗುತ್ತದೆ. ಪವಿತ್ರವಾದ ವಸ್ತುಗಳಿಗೂ ಅಮೌಲ್ಯವಾದ ಕಲಾಕೃತಿಗಳಿಗೂ ಬೆಳ್ಳಿ ಅಥವ ಚಿನ್ನದ ಆಶ್ರಯವನ್ನು ಕಲ್ಪಿಸುವಂತೆ ಪ್ರಾಚೀನಕವಿಗಳಿಗೆ ಇದ್ದುದು ಈ ಭಾವನೆಯೇ. ಅವರ ಕಾವ್ಯಗಳಲ್ಲಿ, ಅವರ ಶೈಲಿಗಳಲ್ಲಿ ವ್ಯಕ್ತಪಡಿಸಿರತಕ್ಕ ಭಾವಗಳು ಮಹಾಕಾವ್ಯಗಳಾಗಿ ಸಹಸ್ರಾರು ವರುಷಗಳಿಂದ ನಿಂತಿರುವುದಕ್ಕೆ, ಅವರು ಅತ್ಯಂತ ಎಚ್ಚರಿಕೆಯಿಂದ ಬರೆದಿರುವುದೇ ಕಾರಣ. ಪ್ಲೇಟೋ ತನ್ನ ರಿಪಬ್ಲಿಕ್ ಎಂಬ ಪುಸ್ತಕಕ್ಕೆ ಮುನ್ನುಡಿಯನ್ನು ಏಳು ಸಾರಿ ಏಳು ಬೇರೆ ಬೇರೆ ರೀತಿಯಲ್ಲಿ ಬರೆದನೆಂದು ಹೇಳುತ್ತಾರೆ.

ಉಡುಪಿನಲ್ಲಿ ಅಲಕ್ಷ್ಯವನ್ನು ತೋರಿಸುವದು ಹೇಗೆ, ಪರಿಚಿತರಾದವರ ವಿಚಾರದಲ್ಲಿ ಅಗೌರವವೆಂದು ಎಣಿಸಲ್ಪಟ್ಟಿದೆಯೋ ಹಾಗೆಯೇ ಅವಸರದಲ್ಲೂ ಅಲಕ್ಷ್ಯದಿಂದಲೂ ಬರೆಯುವ ಕೆಟ್ಟ ಶೈಲಿಯಿಂದ, ವಾಚಕನಲ್ಲಿ ತೀಕ್ಷ್ಣವಾದ ಔದಾಸೀನ್ಯವನ್ನು ತೋರಿಸಿದಂತೆ ಆಗುತ್ತದೆ. ಆದುದರಿಂದ ವಾಚಕನು ಗ್ರಂಥವನ್ನು ಓದದೆ, ಲೇಖಕನನ್ನು ಸರಿಯಾಗಿ ಶಿಕ್ಷಿಸುತ್ತಾನೆ. ವಿಮರ್ಶಕರು ಇತರರ ಕೃತಿಗಳನ್ನು ತಮ್ಮ ಅಲಕ್ಷ್ಯವಾದ ಶೈಲಿಯಲ್ಲಿ, ಕೂಲಿಯ ಶೈಲಿಯಲ್ಲಿ ವಿಮರ್ಶೆಮಾಡುವುದು ಬಹಳ ವಿನೋದಕರವಾಗಿದೆ. ಅದು ನ್ಯಾಯಾಧಿಪತಿಯು ನ್ಯಾಯಸ್ಥಾನಕ್ಕೆ ಬೇಡ್ರೆಸ್ಸಿನಲ್ಲಿ ಬಂದಹಾಗೆ. ಕೊಳಕಾದ ಮತ್ತು ಅವಲಕ್ಷಣದ ಉಡುಪನ್ನು ಧರಿಸುವವರನ್ನು ನೋಡಿದರೆ ಅವರೊಂದಿಗೆ ಮಾತನಾಡಲು ನಾನು ಹಿಂಜರಿಯುತ್ತೇನೆ. ಹಾಗೆಯೇ ಗ್ರಂಥವನ್ನು ಕೈಯಲ್ಲಿ ಹಿಡಿದುಕೊಂಡಾಗ ಅದರ ಶೈಲಿಯಲ್ಲಿ ಅಲಕ್ಷ್ಯವು ಕಂಡರೆ ಅದನ್ನು ದೂರಕ್ಕೆ ಎಸೆದುಬಿಡುತ್ತೇನೆ.

ಲೇಖಕನು ಒಂದು ಕಾಲದಲ್ಲಿ ಒಂದು ವಿಷಯವನ್ನು ಕುರಿತು ಮಾತ್ರ ಸ್ಪಷ್ಟವಾಗಿ ಯೋಚಿಸಬಲ್ಲನು. ಅದೇ ಒಳ್ಳೆಯ ಬರವಣಿಗೆಯ ಲಕ್ಷಣ. ಆದುದರಿಂದ ಲೇಖಕನು ಒಂದೇ ಕಾಲದಲ್ಲಿ ಅನೇಕ ವಿಷಯಗಳನ್ನು ಕುರಿತು ಯೋಚಿಸಬೇಕೆಂದು ಯಾರೂ ಬಯಸುವುದಿಲ್ಲ ಲೇಖಕನು ತನ್ನ ವಾಕ್ಯಗಳನ್ನು ಅತಿದೊಡ್ಡದು ಮಾಡಿ ಮಿಶ್ರವಾಕ್ಯಗಳ ಸಂದಿಯಲ್ಲಿ ತನ್ನ ಇತರ ಅಭಿಪ್ರಾಯಗಳನ್ನು ಸೇರಿಸುವ ಸಣ್ಣ ಸಣ್ಣ ವಾಕ್ಯಗಳನ್ನು ತುರುಕುವಾಗ ಹೀಗೆ ಆಗುತ್ತದೆ. ಇದರಿಂದ ವಾಚಕನಿಗೆ ಅನವಶ್ಯಕವಾಗಿ ಗಡಿಬಿಡಿಯುಂಟಾಗುತ್ತದೆ. ಇಲ್ಲೂ ನಮ್ಮ ದೇಶದವರೇ ಮುಖ್ಯವಾಗಿ ತಪ್ಪಿತಸ್ಥರು. ಜರ್ಮನ್ ಭಾಷೆ ಅತಿಸರಳವಾಗಿರುವುದರಿಂದ ಅದನ್ನು ಹೇಗೆ ಬೇಕಾದರೂ ಎಳೆಯಬಹುದೆಂದು ಹೀಗೆ ಮಾಡುವುದು ನ್ಯಾಯವೇ ? ಫ್ರೆಂಚ್ ಲೇಖಕರು ತಮ್ಮ ಆಲೋಚನೆಗಳನ್ನೆಲ್ಲಾ ಸಕಾರಣವಾಗಿ ಸಾಧ್ಯವಾದಷ್ಟು ಸಹಜವಾದ ರೀತಿಯಲ್ಲಿ ಇಡುತ್ತಾರೆ. ಆದರಿಂದ ಆ ಎಲ್ಲಾ ಭಾವಗಳನ್ನೂ ವಾಚಕನು ಪೂರ್ಣವಾದ ಲಕ್ಷ್ಯದಿಂದ ನೋಡುತ್ತಾನೆ. ಆದರೆ ಜರ್ಮನ್ ಲೇಖಕನು ತಾನು ಎಲ್ಲಾ ಭಾವಗಳನ್ನೂ ಒಂದೇ ವಾಕ್ಯದಲ್ಲಿ ಸೇರಿಸಿ ಅದನ್ನು ಹಿಂದಕ್ಕೂ ಮುಂದಕ್ಕೂ, ಮುಂದಕ್ಕೂ ಹಿಂದಕ್ಕೂ ತಿರುಚುತ್ತಾನೆ ಯಾಕೆಂದರೆ ಒಂದಾದ ಮೇಲೆ ಒಂದರಂತೆ ಆಲೋಚನೆಗಳನ್ನು ಹೇಳುವ ಬದಲು ಆರು ಆಲೋಚನೆಗಳನ್ನು ಒಟ್ಟಾಗಿ ಹೇಳಲು ಅವನು ಪ್ರಯತ್ನಿಸುತ್ತಾನೆ. ಲೇಖಕನ ಉದ್ದೇಶ ವಾಚಕನ ಲಕ್ಷ್ಯವನ್ನು ತನ್ನ ಕಡೆಗೆ ಎಳೆಯುವುದೇ ಆಗಿರಬೇಕು. ಆದರೆ ಜರ್ಮನ್ ಲೇಖಕನು ತಾನು ಆ ಉದ್ದೇಶವನ್ನೇ ಉದಾಸೀನ

ಮಾಡಿರುವುದಲ್ಲದೆ, ಮೇಲಿನ ನಿಯಮವನ್ನು ನಿರಾಕರಿಸಿ ಮೂರುನಾಲ್ಕು ಯೋಚನೆ ಗಳನ್ನು ಒಂದೇ ಕಾಲದಲ್ಲಿ ವಾಚಕನೂ ಸಹ ಯೋಚಿಸಬೇಕೆಂದು ನಿರೀಕ್ಷಿಸುತ್ತಾನೆ ಅಥವ ಅದು ಸಾಧ್ಯವಲ್ಲದುದರಿಂದ ವಾಚಕನ ಆಲೋಚನೆಗಳು ಸರಸರನೆ ಒಂದರ ಹಿಂದೆ ಒಂದು ಅನುಸರಿಸಬೇಕೆಂದು ಬಯಸುತ್ತಾನೆ. ಹೀಗೆ ಲೇಖಕನು ತನ್ನ ಆಡಂಬರದ ಶೈಲಿಯ ತಳಹದಿಯನ್ನು ನಿರ್ಮಿಸಿ ಅತ್ಯಂತ ಸುಲಭವಾದ ಅಭಿಪ್ರಾಯಗಳನು ವ್ಯಕ್ತಪಡಿಸಲು ದೊಡ್ಡ ದೊಡ್ಡ ಪದಗಳೇ ಮುಂತಾದ ಇತರ ತಂತ್ರಗಳನ್ನು ಅನುಸರಿಸಿ ಅದನ್ನು ಪೂರ್ಣ ಮಾಡುತ್ತಾನೆ.

ನೇಬಿನಹಣ್ಣು, ಕೋಳಿ ಇವುಗಳನ್ನು ಒಂದರ ಮಗ್ಗುಲಲ್ಲಿ ಒಂದರಂತೆ ತುರುಕಿ ಪೆಟ್ಟಿಗೆಯೊಳಗೆ ಪೆಟ್ಟಿಗೆಯಂತಿರುವ ಆ ಪದಸಮೂಹಗಳ ದೊಡ್ಡವಾಕ್ಯ ಗಳಿಂದ ಮೆದುಳಿಗೆ ನಿಜವಾಗಿ ಹೆಚ್ಚು ಕೆಲಸ ಕೊಟ್ಟಂತೆ ಆಗುವುದು ವಾಚಕನ ಜ್ಞಾನ ಮತ್ತು ವಿವೇಕಗಳು ಜಾಗ್ರತವಾಗುವುದಕ್ಕಿಂತ ಅವುಗಳ ಚಟುವಟಿಕೆಗೆ ತಡೆಯೂ ದೌರ್ಬಲ್ಯವೂ ಉಂಟಾಗುತ್ತವೆ. ಈ ಬಗೆಯ ವಾಕ್ಯಗಳಿಂದ ವಾಚಕನಿಗೆ ಕೆಲವು ಅರ್ಧವಾಕ್ಯಗಳು ಮಾತ್ರ ದೊರೆತು ಅನಂತರ ಅವನು ಆ ಚೂರುಗಳನ್ನು ಹರಿದ ಕಾಗದದ ಚೂರುಗಳಂತೆ ಜ್ಞಾಪಕದಲ್ಲಿ ಇಟ್ಟುಕೊಂಡು ಮುಂದೆ ಅವುಗಳಿಗೆ ಸೇರಿದ ಉಳಿದ ಅರ್ಧವಾಕ್ಯಗಳು ಬಂದಾಗ ಅವುಗಳನ್ನು ಒಂದಕ್ಕೊಂದಕ್ಕೆ ಗಂಟು ಹಾಕಿಕೊಳ್ಳಬೇಕಾಗುತ್ತದೆ. ಅವನು ಸ್ವಲ್ಪ ಕಾಲದವರೆಗೆ ಸ್ವಲ್ಪವೂ ಯೋಚಿಸದೆ ಜ್ಞಾಪಕಶಕ್ತಿಯನ್ನು ಮಾತ್ರ ಉಪಯೋಗಿಸಿಕೊಂಡು, ವಾಕ್ಯದ ಕೊನೆಗೆ ಬರುವ ವೇಳೆಗೆ ಅರ್ಥ ಹೊಳೆದು ಬುದ್ಧಿಗೆ ಏನಾದರೂ ಕೆಲಸ ದೊರಕೀತೆಂದು ನಿರೀಕ್ಷಿಸುತ್ತಾ ಸುಮ್ಮನೆ ಓದಬೇಕಾಗುತ್ತದೆ. ಹೀಗೆ ಅವನು ಬುದ್ಧಿಯಿಂದ ತಿಳಿಯುವುದಕ್ಕಿಂತ ಹೆಚ್ಚಾಗಿ ಬಾಯಲ್ಲಿ ಉರುಹಾಕಬೇಕಾಗುತ್ತದೆ. ಇದು ಶುದ್ಧ ತಪ್ಪು. ಮತ್ತು ವಾಚಕನ ಸಹನೆಯ ದುರುಪಯೋಗ.

ಸಾಧಾರಣವಾದ ಬರಹಗಾರರಿಗೆ ಈ ಬಗೆಯ ಶೈಲಿಯಲ್ಲಿ ನಿಸ್ಸಂದೇಹವಾಗಿ ಪ್ರೀತಿ ಹೆಚ್ಚು. ಯಾಕೆಂದರೆ ಇಂತಹ ಶೈಲಿಯಿಲ್ಲದಿದ್ದರೆ ವಾಚಕನಿಗೆ ಒಂದೇ ನಿಮಿಷದಲ್ಲಿ ತಿಳಿಯುತ್ತಿದ್ದ ವಿಷಯಗಳು, ಈ ಶೈಲಿಯ ದೆಸೆಯಿಂದ ತಿಳಿಯಲು ಕಷ್ಟವೂ ಕಾಲವ್ಯಯವೂ ಉಂಟಾಗುತ್ತವೆ. ಆಗ ಲೇಖಕನಿಗೆ ಹೆಚ್ಚು ಆಳವಾದ ಬುದ್ಧಿ ಇದೆಯೆಂದು ಅವನು ಊಹಿಸುತ್ತಾನೆ. ಮಧ್ಯಮ ದರ್ಜೆಯ ಬರಹಗಾರರು ತಮ್ಮಲ್ಲಿಯ ಭಾವ ಮತ್ತು ಆಲೋಚನೆಗಳ ದಾರಿದ್ರ್ಯವನ್ನು ಸ್ವಾಭಾವಿಕವಾಗಿ ಮುಚ್ಚಲು ಪ್ರಯತ್ನಿಸಿ ತಮ್ಮಲ್ಲಿ ತಿರುಳು ಇದೆಯೆಂದು ಜನರಿಗೆ ತಪ್ಪು ತಿಳಿವಳಿಕೆ

ಉಂಟುಮಾಡಲು ಉಪಯೋಗಿಸುವ ಉಪಾಯುಗಳಲ್ಲಿ ಇದೂ ಒಂದು. ಈ ಕೆಲಸ ದಲ್ಲಿ ಅವರ ಬುದ್ಧಿವಂತಿಕೆ ನಿಜವಾಗಿಯೂ ಆಶ್ಚರ್ಯಕರವಾದುದು.

ಒಂದು ಭಾವದ ಮೇಲೆ ಮತ್ತೊಂದು ಭಾವವನ್ನು, ಶಿಲುಬೆಯ ಮರವನ್ನು ಒಂದರ ಮೇಲೆ ಒಂದನ್ನು ಹೇರುವಂತೆ ಹೇರುವುದು ವಿವೇಕಕ್ಕೆ ವಿರೋಧವಾದುದು. ಲೇಖಕನು, ತಾನು ಮೊದಲು ಪ್ರಾರಂಭಿಸಿದ ವಿಷಯವನ್ನು ಬಿಟ್ಟು ಬೇರೆ ವಿಷಯ ವನ್ನು ಹೇಳಲು ಹೊರಟಾಗ ಸಂಭವಿಸುವುದೇ ಇದು. ಅವನು ವಾಚಕನಲ್ಲಿ ಅರ್ಥ ವಿಲ್ಲದ ಒಂದು ವಾಕ್ಯಭಾಗವನ್ನು ಬಿಟ್ಟು, ವಾಕ್ಯವು ಪೂರ್ತಿಯಾಗುವವರೆಗೆ ಅದನ್ನು ಇಟ್ಟುಕೊಂಡಿರೆಂದು ಹೇಳಿದಂತೆ ಆಗುತ್ತದೆ. ಇದು ಅತಿಥಿಗಳಿಗೆ ಬರಿಯ ಎಲೆ ಯನ್ನು ಹಾಕಿ ಅದರ ಮೇಲೆ ಆಹಾರ ತಾನೇ ಬಂದು ಬೀಳುವದೆಂದು ನಿರೀಕ್ಷಿಸಿದಂತೆ ಆಗುತ್ತದೆ. ವಾಕ್ಯದೊಳಗೆ ಬರುವ ಉಪವಾಕ್ಯಗಳೂ, ಅರ್ಧವಿರಾಮಗಳೂ, ಅವ ಗ್ರಹಚಿನ್ಹೆಯಲ್ಲಿ ಪುಟದ ಕೆಳಗೆ ಬರುವುದೂ (Foot note), ಆವರಣಚಿನ್ಹೆಯಲ್ಲಿ ಬರುವುದೂ, ಎಲ್ಲಾ ಒಂದೇ ಜಾತಿಗೆ ಸೇರಿದುವು. ಪರಿಮಾಣದಲ್ಲಿ ಮಾತ್ರ ವ್ಯತ್ಯಾಸ. ಡೆಮಾಸ್ತನೀಸನೂ, ಸಿಸಿರೋವೂ ಪದಸಮೂಹಗಳನ್ನು ಉಪವಾಕ್ಯಗ ಳಾಗಿ ಸೇರಿಸಿರಬಹುದು; ಆದರೆ ಅವರೂ ಸೇರಿಸದೆ ಇದ್ದಿದ್ದರೆ ಚೆನ್ನಾಗಿರುತ್ತಿದ್ದಿತು.

ಆದರೆ ಉಪವಾಕ್ಯಗಳನ್ನು ವಾಕ್ಯವೃಂದದಲ್ಲಿ ಸೇರಿಸದೆ ವಾಕ್ಯವನ್ನೇ ಚೂರು ಚೂರು ಮಾಡಿದಂತೆ ಬೆಣೆ ಹೊಡೆದು ಸೇರಿಸಿದಾಗ ಅದು ಅವಿವೇಕದ ಪರಮಾವಧಿ ಯಾಗುತ್ತದೆ. ಉದಾಹರಣೆಗಾಗಿ ಒಬ್ಬ ಮನುಷ್ಯನು ಮಾತನಾಡುತ್ತಿರುವಾಗ ಅಡ್ಡಿ ಬರುವುದು ಮರ್ಯಾದೆಹೀನವಾದುದು; ತಾನೇ ಮಾತನಾಡುತ್ತಿರುವಾಗ ತಾನು ಅಡ್ಡಿ ಬರುವುದು ಅದಕ್ಕಿಂತ ಹೆಚ್ಚು ಮರ್ಯಾದೆಹೀನವಾದುದು. ಆದರೆ ಹೊಟ್ಟೆಯ ಪಾಡಿಗಾಗಿ ಬರೆಯುವ, ಸರಿಯಾದ ಎಚ್ಚರಿಕೆಯನ್ನು ತೆಗೆದುಕೊಳ್ಳದ ಲೇಖಕರೆಲ್ಲಾ ಒಂದು ಪುಟದ ಮೇಲೆ ಆರು ಸಲ ಬರೆಯುವ ಈ ಶೈಲಿಯನ್ನೇ ಅನುಸರಿಸುತ್ತಾರೆ. ಅದರಿಂದ ಅವರಿಗೆ ಎಷ್ಟೋ ಆನಂದವಾಗುತ್ತದೆ. ಅವರು ಸೋಮಾರಿತನದಿಂದ ಮಾತ್ರ ಹೀಗೆ ಬರೆಯುತ್ತಾರೆಂದಲ್ಲ. ಹೆಡ್ಡರಾದುದರಿಂದ ಹಾಗೆ ಮಾಡುತ್ತಾರೆ. ಆ ಸಂದಿಗ್ಧವಾದ ಅಸ್ಪಷ್ಟವಾದ ಶೈಲಿಯಲ್ಲಿಯೇ ಒಂದು ವಿಧವಾದ ಮನೋರಂಜನೆ ಯಿರುವುದೆಂದೂ ತಮ್ಮ ಶೈಲಿಗೆ ಅದು ಜೀವಕಳೆಯನ್ನು ತುಂಬುವುದೆಂದೂ ಅವರು ತಿಳಿಯುತ್ತಾರೆ. ಅಂತಹ ಶೈಲಿ ಸರಿ ಎನ್ನಬಹುದಾದ ಸಂದರ್ಭಗಳು ಎಲ್ಲೋ ಒಂದು ಎರಡು ಅಪರೂಪವಾಗಿ ಇರುತ್ತವೆ.

ಶಿಲ್ಪಿ ಕೆಲಸಮಾಡುವಂತೆ, ತಾವು ಪ್ರಾರಂಭಿಸುವುದಕ್ಕೆ ಮುಂಚೆ, ಒಂದು ಚೂರನ್ನೂ ಬಿಡದೆ ಚೆನ್ನಾಗಿ ಆಲೋಚಿಸಿ ತೀರ್ಮಾನಿಸಿ ಬರೆಯುವ ಲೇಖಕರ ಸಂಖೆ ಅತ್ಯಲ್ಪ. ಅನೇಕರು ಚದುರಂಗದ ಆಟವನ್ನು ಆಡುವಂತೆ ಕೃತಿಯನ್ನು ರಚಿಸುತ್ತಾರೆ. ಆ ಆಟದಲ್ಲಿ ಹೇಗೆ ಕಾಯಿಗಳನ್ನು ಅರ್ಧ ಉದ್ದೇಶದಿಂದಲೂ ಅರ್ಧ ಸಂದರ್ಭಾನು ಸಾರವಾಗಿಯೂ ನಡೆಸುತ್ತಾರೆಯೋ ಹಾಗೆಯೇ ಅವರ ಅಭಿಪ್ರಾಯಗಳೂ ವಾಕ್ಯ ಗಳೂ ಒಂದಕ್ಕೊಂದು ಸೇರಿಕೊಳ್ಳುತ್ತವೆ ಕೆಲವರಿಗೆ ಸಾಮಾನ್ಯವಾಗಿ ತಮ್ಮ ಕೃತಿಯ ಸ್ಥೂಲವಾದ ರೂಪವೂ ತಾವು ಇಟ್ಟುಕೊಂಡಿರುವ ಆದರ್ಶವೂ ಕಣ್ಣಮುಂದೆ ಇರುತ್ತವೆ. ಅನೇಕರಿಗೆ ಇದೂ ಕೂಡ ಇರುವುದಿಲ್ಲ ಹವಳದ ಹುಳು (Coral insect) ಕಟ್ಟುವಂತೆ ವಾಕ್ಯಕ್ಕೆ ವಾಕ್ಯ ಸೇರುತ್ತಾ ಹೋಗುತ್ತದೆ. ಲೇಖಕನ ಉದ್ದೇಶವೇನೆಂಬುದು ದೇವರಿಗೆ ಮಾತ್ರ ಗೊತ್ತು.



